# ಪ್ರಗತಿಶೀಲ ಸಾಹಿತ್ಯದಲ್ಲಿ ವರ್ಗ ಪರಿಕಲ್ಪನೆ

ಕನ್ನಡ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ನಿಬಂಧ


ಸಂಶೋಧಕರು

**ಸತೀಶ್ ಮಹೇಂದ್ರ ಎಂ.ಎಸ್.**

ಮಾರ್ಗದರ್ಶಕರು

**ಪ್ರೊ. ಪಿ.ಕೆ. ರಾಜಶೇಖರ**





ಕರ್ನಾಟಕ ಸಂಘ (ರಿ.) ಮಂಡ್ಯ
ಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

೨೦೦೭-೨೦೦೮

# ಪ್ರಗತಿಶೀಲ ಸಾಹಿತ್ಯದಲ್ಲಿ ವರ್ಗ ಪರಿಕಲ್ಪನೆ

ಕನ್ನಡ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ನಿಬಂಧ

ಸಂಶೋಧಕರು
**ಸತೀಶ್ ಮಹೇಂದ್ರ ಎಂ.ಎಸ್.**



ಮಾರ್ಗದರ್ಶಕರು
**ಪ್ರೊ. ಪಿ.ಕೆ. ರಾಜಶೇಖರ**







ಕರ್ನಾಟಕ ಸಂಘ (ರಿ.)ಮಂಡ್ಯ
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

೨೦೦೭-೨೦೦೮

# ಮಾರ್ಗದರ್ಶಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಕನ್ನಡ ಎಂ.ಫಿಲ್ ಪದವಿಯ ವಿದ್ಯಾರ್ಥಿಯಾದ KSM/00215 ಅವರು ನನ್ನ ಮಾರ್ಗದರ್ಶನದಲ್ಲಿ **'ಪ್ರಗತಿಶೀಲ ಸಾಹಿತ್ಯದಲ್ಲಿ ವರ್ಗ ಪರಿಕಲ್ಪನೆ'** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾನಿಲಯಕ್ಕೆ ಅಥವಾ ಬೇರೆ ಯಾವುದೇ ವಿದ್ಯಾವಿದ್ಯಾನಿಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೧೦-೦೫-೦೮
ಸ್ಥಳ : ಮಂಡ್ಯ

ಪಿ.ಕೆ. ರಾಜಶೇಖರ
ಮಾರ್ಗದರ್ಶಕರು
ನಿವೃತ್ತ ಪ್ರಾಧ್ಯಾಪಕರು
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಂಗೋತ್ರಿ, ಮೈಸೂರು.

ಪಿ. ಕೆ. ರಾಜಶೇಖರ್
ಕನ್ನಡ ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ
ಮೈಸೂರು-೫೭೦೦೦೬

# ಅಭ್ಯರ್ಥಿಯ ಘೋಷಣಾ ಪತ್ರ

ಹಂಪಿಯ ಕನ್ನಡ ವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ೨೦೦೭-೨೦೦೮ನೇ ಸಾಲಿನ ಕನ್ನಡ ಎಂ.ಫಿಲ್. ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ಪ್ರಗತಿಶೀಲ ಸಾಹಿತ್ಯದಲ್ಲಿ ವರ್ಗ ಪರಿಕಲ್ಪನೆ"** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಪ್ರೊ. ಪಿ.ಕೆ. ರಾಜಶೇಖರ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ ನಿಬಂಧದ ಅಧ್ಯಯನಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತ ಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್ ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಅಭ್ಯರ್ಥಿಯ ಸಹಿ

(ಸತೀಶ್ ಮಹೇಂದ್ರ ಎಂ.ಎಸ್.)

ದಿನಾಂಕ: ೪೦೯-೨೦೦೮

ಸ್ಥಳ: ಮಂಡ್ಯ

# ಪರಿವಿಡಿ

## ಅಧ್ಯಾಯ - ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಧರ್ಮ ಮತ್ತು ರಾಜಕೀಯ ಪ್ರತಿಯೊಂದು ಸಮಾಜವನ್ನು ನಿಯಂತ್ರಿಸುತ್ತಾ ಬಂದಿರುವುದು ಅಗೋಚರವಾಗೇನೂ ಉಳಿದಿಲ್ಲ. ಅಂತೆಯೇ ಪ್ರಾಚೀನ ಕನ್ನಡ ಸಾಹಿತ್ಯವು ಧರ್ಮ ಮತ್ತು ರಾಜಕೀಯ ಆಶ್ರಯದಲ್ಲಿಯೇ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ವೃದ್ಧಿಯಾಗುತ್ತಾ ಬಂದಿದೆ. ಕನ್ನಡ ಸಾಹಿತ್ಯ ಸೌಧಕ್ಕೆ ಭದ್ರ ತಳಪಾಯವನ್ನು ನಿರ್ಮಿಸಿದ ಕೀರ್ತಿ ಜೈನ ಧರ್ಮಕ್ಕೆ ಹಾಗೂ ಅದರ ಅನುಯಾಯಿಗಳಿಗೆ ಸಲ್ಲಬೇಕು. ತರುವಾಯ ವೀರಶೈವ ಧರ್ಮ ಪರಂಪರೆ, ಭಾಗವತ ಪರಂಪರೆಗಳು ಸಾಹಿತ್ಯ ರಚಿಸುವಲ್ಲಿ ಪ್ರಮುಖ ಪಾತ್ರ ವಹಿಸಿದೆ. ರಾಜಾಶ್ರಯದಿಂದ ವಂಚಿತರಾದರೂ ಕವಿಗಳು ಧರ್ಮದಿಂದ ವಂಚಿತರಾಗಿಲ್ಲ ಎಂಬುದನ್ನು ನಿಸ್ಸಂಶಯವಾಗಿ ಹೇಳುವ ಸಂಗತಿಯಾಗಿದೆ. ಸಾವಿರ ವರ್ಷಗಳಿಗಿಂತಲೂ ಹೆಚ್ಚಿನ ಇತಿಹಾಸ ಹೊಂದಿರುವ ಕನ್ನಡ ಸಾಹಿತ್ಯವು ಭಾರತೀಯ ಸಾಹಿತ್ಯ ಲೋಕದಲ್ಲಿ ತನ್ನದೇ ಆದಂತಹ ಪ್ರಮುಖ ಸ್ಥಾನವನ್ನು ಪಡೆದಿದೆ.

ಜಾಗತಿಕ ಸಾಹಿತ್ಯ ಕ್ಷೇತ್ರದಲ್ಲೂ ಪ್ರವೇಶ ಪಡೆದುಕೊಂಡಿದೆ. ಪ್ರಸ್ತುತ ಭಾರತೀಯ ಸಂದರ್ಭದಲ್ಲಿ ತಮಿಳಿನ ನಂತರದ ಇತಿಹಾಸವನ್ನು ಹೊಂದಿದ್ದರೂ ಸಮೃದ್ಧಿಯಲ್ಲಿ ಸಂಸ್ಕೃತಿ ಸಾಹಿತ್ಯದ ನಂತರದ ಸ್ಥಾನ ಗಳಿಸಿ ಇತರ ಸಾಹಿತ್ಯಗಳಿಗಿಂತ ಮುಂಚೂಣಿಯಲ್ಲಿದೆ. ಇದಕ್ಕೆ ಬ್ರಿಟಿಷ್ ಶಿಕ್ಷಣ ಪದ್ಧತಿ ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆ ಮತ್ತು ಪ್ರಭಾವ ಕ್ರಿಯಾಶೀಲ, ಸೃಜನಶೀಲ ಸಾಹಿತ್ಯಗಳ ಅಭಿವ್ಯಕ್ತಿ ಮುಂತಾದ ಅಂಶಗಳು ಕಾರಣವಾಗಿವೆ.

ಬಿ.ಎಂ.ಶ್ರೀಯವರು ನವೋದಯ ಸಾಹಿತ್ಯಕ್ಕೆ ಅಧಿಕೃತವಾಗಿ ನಾಂದಿ ಹಾಡಿದರು. ಹೊಸಬಗೆಯ ಕಾವ್ಯ, ಕಥೆ, ಕಾದಂಬರಿ, ಪ್ರಬಂಧ, ನಾಟಕ ಮುಂತಾದ ಸಾಹಿತ್ಯ ವೈವಿಧ್ಯತೆಯನ್ನು ನವೋದಯ ಕಾಲ ನೀಡಿತು. ಭಾವಗೀತೆ ಈ ಅವಧಿಯ ಪ್ರಧಾನ ಅಭಿವ್ಯಕ್ತಿಯಾಗಿತ್ತು. ಅನುವಾದವು ಈ ಘಟ್ಟದಲ್ಲಿ ನಡೆಯಿತು.

"೧೯೧೧ರಲ್ಲಿಯೇ ಶ್ರೀಯವರು ಧಾರವಾಡ ವಿದ್ಯಾವರ್ಧಕ ಸಂಘದಲ್ಲಿ ಕನ್ನಡ ಮಾತು ತಲೆ ಎತ್ತುವ ಬಗೆ" ಎಂಬ ವಿಷಯ ಕುರಿತು ಭಾಷಣ ಮಾಡಿದರು. ಇಂಗ್ಲಿಷ್‌ಬಲ್ಲ ವಿದ್ಯಾವಂತರೂ ಎಳ್ಳಷ್ಟು ಹರ್ಷವಿಲ್ಲ, ಲಾಭವಿಲ್ಲ, ಎಲ್ಲಾ ಕೃತ್ರಿಮ ಅಸಂಬದ್ಧ ಎಂದು ಕೈಬಿಟ್ಟರು. ಸಂಸ್ಕೃತ ವಿದ್ವಾಂಸರೂ ಕನ್ನಡದಲ್ಲೇನಿದೆ ಸ್ವಾರಸ್ಯ, ಸಂಸ್ಕೃತದ ಎಂಜಲು, ಉಗಿದ ಕಬ್ಬಿನ ಸಿಪ್ಪೆ ಎಂದು ಧಿಕ್ಕರಿಸುತ್ತಾರೆ.. ಇಂಗ್ಲೀಷರ ಕಾವ್ಯಮಾಲೆ ಪರಮೋತ್ಕೃಷ್ಟವಾದದ್ದು. ಗ್ರೀಕ್, ಲ್ಯಾಟಿನ್, ಜರ್ಮನ್, ಫ್ರೆಂಚ್ ಮುಂತಾದ ಭಾಷೆಗಳಿಂದ ಸಾರವನ್ನು ಹೀರಿ ಪುಷ್ಟಿಯಾದದ್ದು. ಅದರ ಗುಣವನ್ನು ಕಲಿತು ಅದರ ಐಶ್ವರ್ಯದಲ್ಲಿ ಭಾಗಿಗಳಾಗಬೇಕಾದ ರೀತಿಯಲ್ಲಿ ಭಾಷಾಂತರಗಳಿಂದ ಕನ್ನಡ ಬೊಕ್ಕಸವನ್ನು ತುಂಬಿಡಬೇಕು"[೧] ಎಂದು ಬರಹಗಾರರಿಗೆ ಕರೆಕೊಟ್ಟರು. ಈ ಕರೆಗೆ ಓಗೊಟ್ಟ ಸಾಹಿತ್ಯಾಸಕ್ತರು ಬರಹಗಾರರು ಕವಿಗಳು ಸಾಹಿತ್ಯ ಕೃಷಿಯಲ್ಲಿ ತೊಡಗಿ ಕನ್ನಡಕ್ಕೆ ಮಹತ್ವದ ಸ್ಥಾನ ನೀಡಿ ಸಾಹಿತ್ಯ ರಚನೆ ಮಾಡಿದರು.

ಪ್ರೇರಣೆಯು ಆಂಗ್ಲ ಸಾಹಿತ್ಯದಿಂದಾದರೂ ಅಭಿವ್ಯಕ್ತಿಯ ಮೂಲದ್ರವ್ಯ ಕನ್ನಡದ್ದಾಯಿತು. ವಿವಿಧ ಮೂಲದ ತೊರೆಗಳು, ಹಳ್ಳಕೊಳ್ಳಗಳು ಸೇರಿ ನದಿಯೊಂದನ್ನು ನಿರ್ಮಿಸುವಂತೆ ವಿವಿಧ ಸಾಹಿತ್ಯ ಪ್ರಕಾರಗಳು, ಸಾಹಿತ್ಯ ಕೃತಿಗಳು ಕನ್ನಡ ಸಾಹಿತ್ಯ ಭಂಡಾರದಲ್ಲಿ ಲೀನವಾಗುತ್ತಾ ಹೋದಂತೆ ಭಂಡಾರವು ಬೃಹತ್ತಾಗಿ ಬೆಳೆಯತೊಡಗಿತು.

## ಉದ್ದೇಶ

ನವೋದಯ ಪರಂಪರೆಯು ಉಚ್ಛ್ರಾಯ ಸ್ಥಿತಿಯನ್ನು ತಲುಪಿದ್ದು ಏರಿದ ಸಮುದ್ರದ ಅಲೆಯು ಇಳಿಯುವಂತೆ ಹಲವು ಮಿತಿಗಳಿಂದಾಗಿ ತನ್ನ ಮಹತ್ವವನ್ನು ಕಳೆದುಕೊಳ್ಳತೊಡಗಿತು. ಇಪ್ಪತ್ತನೆಯ ಶತಮಾನದ ಮಧ್ಯಭಾಗದಲ್ಲಿ ಕಾರ್ಲ್‌ಮಾರ್ಕ್ಸ್‌ನ ವಿಚಾರಧಾರೆಗಳು ಜಗತ್ತಿನಾದ್ಯಂತ ವ್ಯಾಪಿಸತೊಡಗಿತು. ಇವು ಅಬ್ಬಾಸ್ ಹಾಗೂ ಪ್ರೇಮ್‌ಚಂದ್ ಅವರ ನೇತೃತ್ವದಲ್ಲಿ ಭಾರತವನ್ನು ಪ್ರವೇಶಿಸಿದವು. ಅನಕೃ ಅವರ ನಾಯಕತ್ವದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರಕ್ಕೂ ಪದಾರ್ಪಣಾ ಮಾಡಿದ ಮಾರ್ಕ್ಸ್‌ವಾದವು ಸಾಹಿತ್ಯದ ದಿಕ್ಕನ್ನೇ ಬದಲಿಸಿತು. ಸ್ಥಗಿತಗೊಂಡಿದ್ದ ವ್ಯವಸ್ಥೆಯೊಂದಕ್ಕೆ ಚುರುಕು ಮುಟ್ಟಿಸಿ ಚಲನೆಗೆ ಒಳಿತು ಮಾಡಿದ ಪ್ರಗತಿಪರ ಚಿಂತಕರು ಸಾಮಾಜಿಕ ವ್ಯವಸ್ಥೆಯ ಬದಲಾವಣೆಗೆ ಪಣ ತೊಟ್ಟರು. ತಮ್ಮ ಹರಿತವಾದ ಬರಹದಿಂದಾಗಿ ಇಡೀ ವ್ಯವಸ್ಥೆಯನ್ನೇ ತಲ್ಲಣಗೊಳಿಸಿದ ಈ ಅವಧಿಯ ಸಾಹಿತ್ಯವನ್ನು ಪ್ರಗತಿಶೀಲ ಸಾಹಿತ್ಯ ಪಂಥ ಎಂದು ಕರೆಯತೊಡಗಿದರು. ನವೋದಯ ಸಾಹಿತ್ಯಕ್ಕೆ ಪ್ರತಿಭಟನೆಯಾಗಿ ರಚನೆಗೊಂಡ ಪ್ರಗತಿಶೀಲ ಸಾಹಿತ್ಯವು ಪ್ರಗತಿಯನ್ನೇ ತನ್ನ ಪ್ರಮುಖ ಗುರಿಯನ್ನಾಗಿಸಿಕೊಂಡು ಜನ್ಮ ತಳೆಯಿತು. ಈ ಚಳುವಳಿಯನ್ನು ಕುರಿತು ೧೯೪೬ ಅಕ್ಟೋಬರ್ ೨೭ರಂದು ಧಾರವಾಡ ಜಿಲ್ಲೆಯ ಆರನೆಯ ಕನ್ನಡ ಸಮ್ಮೇಳನದ ಅಧ್ಯಕ್ಷ ಪೀಠದಿಂದ ಅ.ನ.ಕೃ. ಅವರು "ಪ್ರಜಾಸ್ವಾಮ್ಯ ಹಾಗೂ ಬಂಡವಾಳ ಸ್ವಾಮ್ಯಗಳೆಂಬ ಎರಡೂ ಪಕ್ಷಗಳು ಜಗತ್ತಿನಲ್ಲೆಲ್ಲಾ ಉದಯಿಸುತ್ತಿವೆ. ಇವೇ ಎರಡು ಜಾತಿಗಳು. ಇವುಗಳ ಮುಂದೆ ಉಳಿದವು ಗೌಣ ಸಾಹಿತಿ ತಾನು ಯಾವ ಜಾತಿಯವನೆಂದು ನಿರ್ಧರಿಸಿಕೊಳ್ಳಬೇಕು. ಸಾಹಿತ್ಯ ವಿಲಾಸದ ಸಾಧನವಲ್ಲ. ದೇಶೋದ್ಧಾರಕ್ಕೆ ಆತ್ಮೋದ್ಧಾರಕ್ಕೆ ಸಾಧನವಾಗಿರುವ ಗಾಯತ್ರಿಯಿದು. ಸಾಹಿತಿ ತನ್ನ ಸುಪ್ತ ಚೇತನದ ಅರಿವನ್ನುಂಟು ಮಾಡಿಕೊಂಡು ಅದರ ಸಂಪೂರ್ಣ ಪ್ರಯೋಜನವನ್ನು ತನ್ನ ನಾಡಿನವರಿಗೆ ಮಾಡಿಕೊಡಬೇಕು. ಅವನ ಕ್ರಾಂತಿ ಖಡ್ಗಕ್ಕೆ ಲೋಕದ ತಾಮಸ ಕಳೆಗಳು ನಡುಗಬೇಕು. ಅದು ದುರ್ಬಲರ, ದಲಿತರ, ಬಡವರ, ರಕ್ಷಾ ಕವಚವಾಗಬೇಕು. ಆಗಲೇ ಸಾಹಿತ್ಯದ ಸಾರ್ಥಕತೆ, ಸಾಹಿತಿಯ ಜನ್ಮ ಸಾಫಲ್ಯ.. ನಾವು ಝೋಲ, ಮಯಕೋವಸ್ಕಿ, ಗಾರ್ಕಿ, ಸಿಂಕ್ಲೇರ್ ಅವರ ಕೃತಿಗಳನ್ನು ಓದುವಂತೆ ಹೊರಗಿನವರು ನಮ್ಮ ಕೃತಿಗಳನ್ನು ಓದಬೇಡವೇ?"[೨] ಎಂಬ ಸುದೀರ್ಘ ಭಾಷಣದಲ್ಲಿ ಪ್ರಗತಿಶೀಲ ಬರಹಗಾರರ ಮೂಲ ಉದ್ದೇಶವೇನೆಂಬುದು ನಮಗೆ ವೇದ್ಯವಾಗುತ್ತದೆ. ಸಾಹಿತ್ಯವು ಯಾರಿಗಾಗಿ? ಏತಕ್ಕಾಗಿ ? ಎಂದು ಸಾಹಿತಿಗಳು ಆತ್ಮಾವಲೋಕನ ಮಾಡಿಕೊಳ್ಳುವಂತೆ ಅ.ನ.ಕೃ. ಅವರ ಭಾಷಣವು ಪರಿಣಾಮಕಾರಿಯಾಯಿತು.

ಪ್ರಗತಿಶೀಲ ಸಾಹಿತಿಗಳು ನವೋದಯದವರಂತೆ ಬದುಕು ಸ್ವೀಕಾರಾರ್ಹ ಎಂದು ಸ್ವೀಕರಿಸಿದರು. ಆದರೆ ಸಾಮಾಜಿಕ ವ್ಯವಸ್ಥೆಯೊಳಗಿನ ಮಲಿನತೆಯನ್ನು ಮುಟ್ಟಿ ಮಾತನಾಡಿದರು. ಸಮಾಜದಲ್ಲಿ ತುಂಬಿರುವ ಕೊಳೆಯನ್ನು ತೊಳೆದು ಸ್ವಚ್ಛಗೊಳಿಸಬೇಕು ಎಂಬ ಮಹದಾಶಯವನ್ನು ಹೊಂದಿದ್ದರು. ನವೋದಯ ಪರಂಪರೆಯು ಯಾವುದನ್ನು ಸ್ಪರ್ಶಿಸದೆ ಮಡಿವಂತಿಕೆಯ ಸೋಗಿನಲ್ಲಿ ಗೌಪ್ಯವಾಗಿಸಿತೋ ಅದನ್ನೇ ತಮ್ಮ ಕೃತಿಗೆ ವಸ್ತುವನ್ನಾಗಿರಿಸಿಕೊಂಡು ಸಾಹಿತ್ಯ ಕೃಷಿಯನ್ನು ಮಾಡಿ ಉತ್ತಮ ಫಸಲನ್ನು ಪಡೆಯಲು ಪ್ರಾಮಾಣಿಕ ಪ್ರಯತ್ನ ಮಾಡಿದರು. ತಮ್ಮ ಮೊನಚಾದ ಬರಹದಿಂದ ಸಾಮಾಜಿಕ ವ್ಯವಸ್ಥೆಯೊಳಗಿನ ಅಕ್ಷಮ್ಯ ಅಪರಾಧಗಳನ್ನು ಬೆತ್ತಲುಗೊಳಿಸಿದರು.

ಪ್ರಗತಿಶೀಲ ಸಾಹಿತ್ಯದಲ್ಲಿ ಕಥೆ ಹಾಗೂ ಕಾದಂಬರಿಗಳು ಜನಪ್ರಿಯ ಸಾಹಿತ್ಯ ಪ್ರಕಾರವಾಗಿಬಿಟ್ಟವು. ಜನತೆಗೆ ಸರಳವಾಗಿ ಸಾಹಿತ್ಯದ ಸಾರ್ಥಕತೆಯನ್ನು ತಲುಪಿಸಲು, ತಮ್ಮ ಅನುಭವ ಆಲೋಚನೆಗಳನ್ನು ಅಭಿವ್ಯಕ್ತಿಗೊಳಿಸಲು ಕತೆ, ಕಾದಂಬರಿಗಳನ್ನು ಆಯ್ಕೆ ಮಾಡಿಕೊಂಡಿದ್ದು ಔಚಿತ್ಯವೇ ಸರಿ. ಅದರಲ್ಲೂ ಕಾದಂಬರಿಯೇ ಪ್ರಗತಿಶೀಲರ ಪ್ರಧಾನ ಅಸ್ತ್ರವಾಯಿತು. ಅತ್ಯಧಿಕ ಓದುಗರನ್ನು ಸೃಷ್ಟಿಸಿದ ಕೀರ್ತಿಯೂ ಈ ಕಾಲಘಟ್ಟದ ಸಾಹಿತಿಗಳಿಗೆ ಸಲ್ಲಬೇಕು. ಅನಕೃ, ತರಾಸು, ಕಟ್ಟಿಮನಿ, ಚದುರಂಗ, ನಿರಂಜನ, ಬಲ್ಲಾಳ, ಅರ್ಚಕ ವೆಂಕಟೇಶ ಮುಂತಾದವರು ಪ್ರಗತಿಶೀಲ ಪಂಥದ ಪ್ರಮುಖರು. ಬಡತನ ಕಾರ್ಮಿಕರ ಸಮಸ್ಯೆ, ವೇಶ್ಯಾ ಸಮಸ್ಯೆ, ಮಠಗಳಲ್ಲಿ ನಡೆಯುತ್ತಿರುವ ಅವ್ಯವಹಾರ ಮುಂತಾದವುಗಳನ್ನು ತಮ್ಮ ಕೃತಿಗಳಿಗೆ ವಸ್ತುವನ್ನಾಗಿಸಿಕೊಂಡು ಸಾಹಿತ್ಯ ರಚನೆ ಮಾಡಿದರು. ಶೋಷಣೆಗೆ ಒಳಗಾಗಿರುವ ಹರಿಜನರು, ಬಡವರು, ಸ್ತ್ರೀಯರು, ರೈತರು, ಕಾರ್ಮಿಕರು ಮುಂತಾದ ಎಲ್ಲಾ ವರ್ಗದ ಹಿತಾಸಕ್ತಿ ಸಾಹಿತ್ಯದಲ್ಲಿ ಮುಖ್ಯವಾಗಬೇಕು. ಹಸಿವು, ಬಡತನ, ಅಜ್ಞಾನ, ನಿರುದ್ಯೋಗ, ಅನಕ್ಷರತೆ, ಧರ್ಮಾಂಧತೆ, ಅಂಧಶ್ರದ್ಧೆ ಮುಂತಾದವುಗಳನ್ನು ಖಂಡತುಂಡವಾಗಿ ವಿರೋಧಿಸಿದರು.

ಪ್ರಗತಿಶೀಲ ಪಂಥದಲ್ಲಿ ಪ್ರಮುಖರಾದ ಕಟ್ಟಿಮನಿಯವರು ಮಠಗಳಲ್ಲಿ, ಕಾರ್ಖಾನೆಗಳಲ್ಲಿ, ಧರ್ಮಸಂಸ್ಥೆಗಳಲ್ಲಿ ನಡೆಯುತ್ತಿರುವ ಅನ್ಯಾಯವನ್ನು ಕಂಡು ರೊಚ್ಚಿಗೆದ್ದು ನಿಷ್ಠುರವಾಗಿ ಬರೆದರು. ಜ್ವಾಲಾಮುಖಿಯ ಮೇಲೆ ಕಾದಂಬರಿಯು ಅವರ ಮಹತ್ವಾಕಾಂಕ್ಷೆಯ ಕಾದಂಬರಿಗಳಲ್ಲಿ ಒಂದು. ಕಾರ್ಮಿಕರ ಶೋಷಣೆ, ಕಾರ್ಮಿಕರ ಬವಣೆಗಳು, ಸಂಘಟನೆಯ ಪಿತೂರಿಯಲ್ಲಿ ಮೂಗು ತೂರಿಸುವ ಮಾಲೀಕರು ಮುಂತಾದ ವರ್ಗ ಪರಿಕಲ್ಪನೆಯ ದೃಷ್ಟಿಯನ್ನು ಈ ಕಾದಂಬರಿಯಲ್ಲಿ ಅನಾವರಣಗೊಳಿಸಿದ್ದಾರೆ. ಇದೇ ಪಂಥದಲ್ಲಿ ಗುರುತಿಸಿಕೊಂಡಿರುವ ವ್ಯಾಸರಾಯ ಬಲ್ಲಾಳರ 'ಬಂಡಾಯ' ಕಾದಂಬರಿ ಅವರ ಶ್ರೇಷ್ಠ ಕಾದಂಬರಿಗಳಲ್ಲಿ ಒಂದು. ಈ ಕಾದಂಬರಿಯು ಮುಂಬೈನ ಕಾರ್ಮಿಕರ ಜಗತ್ತಿನಲ್ಲಿ ತನ್ನ ಬೇರುಗಳನ್ನು ಬಿಟ್ಟುಕೊಂಡಿದೆ. ಮುಂಬೈನ ಗಿರಣಿಗಳಲ್ಲಿ ನಡೆಯುತ್ತಿರುವ ಕಾರ್ಮಿಕರ ಶೋಷಣೆ, ಕಾರ್ಮಿಕರ ಸಂಘಟನೆಯಲ್ಲಿ ಕಂಡು ಬರುವ ಶಿಥಿಲತೆ,

ಹಿಂಸೆ, ಬಂಡವಾಳಶಾಹಿಗಳ ದುರಾಲೋಚನೆಗಳು ಕಾದಂಬರಿಯಲ್ಲಿ ಬಿಚ್ಚಿಕೊಂಡಿವೆ. ಪ್ರಗತಿಶೀಲರ ಈ ಕಾದಂಬರಿಗಳನ್ನು ಪ್ರಾತಿನಿದಿಕವಾಗಿ ಗಮನಿಸಿದ್ದು ಇದರಲ್ಲಿ ವರ್ಗದ ಪರಿಕಲ್ಪನೆ ಅನಾವರಣಗೊಂಡಿದೆ.

ಪ್ರಗತಿಶೀಲ ಸಾಹಿತಿಗಳು ಹೆಚ್ಚಿನ ಸಂಖ್ಯೆಯಲ್ಲಿ ಕಾದಂಬರಿಗಳನ್ನು ರಚಿಸಿದ್ದು ಅಧ್ಯಯನ ದೃಷ್ಟಿಯಿಂದ ಹರಹು ಹೆಚ್ಚಾಗುವುದರಿಂದ ಈ ಒಂದು ಕಾದಂಬರಿ ಪ್ರಕಾರಗಳಲ್ಲಿ ಪ್ರಾತಿನಿದಿಕವಾಗಿ ಬಲ್ಲಾಳ ಮತ್ತು ಕಟ್ಟಿಮನಿಯವರ ಬಂಡಾಯ ಮತ್ತು ಜ್ವಾಲಾಮುಖಿಯ ಮೇಲೆ ಕಾದಂಬರಿಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಜೊತೆಗೆ ಕಥಾ ಸಾಹಿತ್ಯದಲ್ಲಿ ಕಟ್ಟಿಮನಿ, ನಿರಂಜನ, ಚದುರಂಗರ ವರ್ಗ ಪರಿಕಲ್ಪನೆಯ ಕೆಲವು ಕಥೆಗಳನ್ನು ಮಾತ್ರ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿದ್ದು ಅಧ್ಯಯನ ಮಾಡಲಾಗಿದೆ. ಕಾಲಮಿತಿ ಮತ್ತು ವಿಷಯ ಹರಹು ಹೆಚ್ಚಾಗಿರುತ್ತದೆ. ಈ ನಿಬಂಧಕ್ಕೆ ಮಿತಿ ಆಗಿದ್ದು ಕೆಲವೇ ಕತೆ ಮತ್ತು ಕಾದಂಬರಿಗಳನ್ನು ಮಾತ್ರ ಅಧ್ಯಯನ ಮಾಡಲಾಗಿದೆ.

೧. ಎಲ್.ಎಸ್. ಶೇಷಗಿರಿ ರಾವ್ : ಹೊಸಗನ್ನಡ ಸಾಹಿತ್ಯ ಚರಿತ್ರೆ, : ಅಂಕಿತ ಪುಸ್ತಕ ಪ್ರಕಾಶಕರು, ಬೆಂಗಳೂರು ( ೨೦೦೨) ಪು.೩೨ರಲ್ಲಿ

೨. ಎಲ್.ಎಸ್. ಶೇಷಗಿರಿ ರಾವ್ : ಹೊಸಗನ್ನಡ ಸಾಹಿತ್ಯ ಚರಿತ್ರೆ, : ಅಂಕಿತ ಪುಸ್ತಕ ಪ್ರಕಾಶಕರು, ಬೆಂಗಳೂರು ( ೨೦೦೨) ಪು.೬೨ರಲ್ಲಿ

* * * * * *

## ಅಧ್ಯಾಯ - ೨

# ಪಾಶ್ಚಾತ್ಯರಲ್ಲಿ ಪ್ರಗತಿಶೀಲ ಸಾಹಿತ್ಯದ ಪರಿಕಲ್ಪನೆ

ಪ್ರಗತಿಶೀಲ ಸಾಹಿತ್ಯ ಚಳುವಳಿ ಎನ್ನುವುದು ಬರಿ ಕರ್ನಾಟಕದ ಸಂದರ್ಭದಲ್ಲಿ ಅದು ಯೂರೋಪಿನ ಮೂಲಕ ಭಾರತವನ್ನು ತಲುಪಿದೆ. ಈ ಮಾತನ್ನು ಸಾಹಿತ್ಯ ಕ್ಷೇತ್ರದಿಂದ ರಾಜಕೀಯ ಮತ್ತು ಸಾಮಾಜಿಕ ಸಂದರ್ಭಕ್ಕೆ ಒಳಗು ಮಾಡಿಕೊಳ್ಳಬೇಕು. ಅಷ್ಟಕ್ಕೂ ಸಾಹಿತ್ಯ ಸಮಾಜದಿಂದ ಹೊರತಲ್ಲ ಹಾಗೆಯೇ ರಾಜಕೀಯ ಕ್ಷೇತ್ರವು ಸಮಾಜದ ಬದಲಾವಣೆ ವಿಶ್ವಸಾಹಿತ್ಯದ ಸಂದರ್ಭದಲ್ಲಿ ಸಾಹಿತ್ಯವನ್ನು ಸಮಾಜ ಮತ್ತು ರಾಜಕೀಯ ಕ್ರಾಂತಿಗೆ ಬಳಸಿಕೊಳ್ಳುವ ಬಹುಮುಖ್ಯ ಕೆಲಸವನ್ನು ಮೊದಲಿಗೆ ಪ್ರಗತಿಶೀಲ ಚಳುವಳಿ ಮಾಡಿತೆನ್ನಬಹುದು.

ಪ್ರಗತಿಶೀಲ ಚಳುವಳಿಗೆ ಇಂಗ್ಲೆಂಡ್ ಮೊದಲ ವೇದಿಕೆಯಾಯಿತು. ಅದು ಅಲ್ಪ ಕಾಲದಲ್ಲಿ ಯೂರೋಪನ್ನು ವ್ಯಾಪಿಸಿತು, ರಷ್ಯಾದ ಸಾಹಿತಿಗಳು ಪ್ರಗತಿಶೀಲ ಸಾಹಿತ್ಯದಲ್ಲಿ ಕ್ರಾಂತಿ ಮಾಡಿದರು. ಭಾರತವು ಈ ಹೊರಳುವಿಕೆಗೆ ಒಳಗಾಗಿತು. ಅದು ೧೯೩೫ರ ಕಾಲ ಆಗಿನ್ನೂ ಭಾರತ ಬ್ರಿಟಿಷರ ದಾಸ್ಯ ಶೃಂಖಲೆಗೆ ಒಳಗಾಗಿತ್ತು. ಸ್ರಾಮಾಜ್ಯಶಾಹಿ ಪುರೋಹಿತಶಾಹಿ ಹಾಗೂ ರಾಜ ಪ್ರಭುತ್ವಗಳ ಕೈಯಲ್ಲಿ ಭಾರತ ನಲುಗಿತ್ತು. ಇಂಥ ಉಸಿರುಕಟ್ಟುವ ವಾತಾವರಣವನ್ನು ತಿಳಿಗೊಳಿಸುವ ಕಾರ್ಯ ಆಗ ಪ್ರಗತಿಶೀಲರ ಗುರಿಯಾಗಿತ್ತು. ಆದರೆ ಯೂರೋಪ್ ಅಂಥ ವಾತಾವರಣದಿಂದ ಆಗಲೇ ಹೊರ ಬಂದು ಎಷ್ಟೋ ವರ್ಷಗಳು ಆಗಿದ್ದವು. ಅಮೇರಿಕಾ ೧೭೭೬ರ, ಪ್ರಾನ್ಸ್ ೧೭೮೯ ರಷ್ಯಾ ೧೯೧೭ ರಲ್ಲಿ ಚರ್ಚುಗಳು ಮತ್ತು ರಾಜಪ್ರಭುತ್ವದ ಹಿಡಿತದಿಂದ ಹೊರ ಬಂದಿತು. ೧೮ ಮತ್ತು ೧೯ನೇ ಶತಮಾನದಲ್ಲಿ ಜರುಗಿದ ಕೈಗಾರಿಕಾ ಕ್ರಾಂತಿಯ ಹೊತ್ತಿಗೆ ಅವು ಮತ್ತೊಂದು ಕ್ರಾಂತಿಗೆ ಸಿದ್ದವಾಗಿ ನಿಂತಿದ್ದರು. ಇವೆಲ್ಲ ಬೂರ್ಜ್ವಾ ಪ್ರಗತಿಶೀಲ ಕ್ರಾಂತಿಗಳು ಆಗಿದ್ದವು. ಭಾರತ ೧೯೪೭ರ ವರೆಗೆ ಅಂಥ ಕ್ರಾಂತಿಗೆ ತಾನು ಬೇಕಾಯಿತು.

೨೦ನೇ ಶತಮಾನದ ೪೦ರ ದಶಕದಲ್ಲಿ ವಿಶ್ವ ಸಾಹಿತ್ಯ ಕ್ಷೇತ್ರದಲ್ಲಿ ಪ್ರಮುಖ ಚಾರಿತ್ರಿಕ ಘಟ್ಟ. ಹೆಚ್. ಎಸ್. ರಾಘುವೇಂದ್ರರಾವ್ ಹೇಳುವ ಹಾಗೆ ೧೯೩೫ ಪ್ರಗತಿಶೀಲ ಸಾಹಿತಿಗಳ ಕನಸಿನ ಕಾಲ'[೧] ಆಗಲೇ ಮಾರ್ಕ್ಸ್ ಸಮಾಜವಾದದ ಸಾಹಿತ್ಯದ ಸಿದ್ದಾಂತವಾಗಿ ಬಳಕೆಯಾಗಿದ್ದು ಈ ಹಿಂದೆ ಮಾರ್ಕ್ಸ್ ಸಿದ್ಧಾಂತ ಸಾಹಿತ್ಯದಲ್ಲಿ ಬಳಕೆಯಾಗಿರಲಿಲ್ಲವೆಂದೇ ಅರ್ಥವಲ್ಲ. ಆದರೆ ಅದೊಂದು ಸಾಹಿತ್ಯ ಚಳುವಳಿಯ ಮಾಧ್ಯಮವಾಗಿ ಬಳಕೆಯಾಗಿರಲಿಲ್ಲ. ಅಲ್ಲದೆ ರಾಜಕೀಯ ಮತ್ತು ಆರ್ಥಿಕ ಕ್ರಾಂತಿಗಳಿಗಷ್ಟೆ ಮೀಸಲಾದ ಸಿದ್ಧಾಂತವಾಗಿತ್ತು. ನಂತರ ಅದು ಸಾಹಿತ್ಯ ಮಾಧ್ಯಮದ ಮೂಲಕ ಇನ್ನೂ ತೀವ್ರವಾಗಿತ್ತು.

೧೮ ಮತ್ತು ೧೯ನೇ ಶತಮಾನದಲ್ಲಿ ಇಂಗ್ಲೆಡ್ ಕೈಗಾರಿಕಾ ಕ್ರಾಂತಿಯನ್ನು ಆಹ್ವಾನಿಸಿತು ಇದೇ ವೇಳೆಯಲ್ಲಿ ಇಂಗ್ಲೇಡ್ ಅನ್ನು ಅನುಸರಿಸಿ ಫ್ರಾನ್ಸ್, ಜರ್ಮನಿ, ಇಟಲಿ ರಷ್ಯಾ ಅಮೇರಿಕಾ ಮುಂತಾದ ಯೂರೋಪಿನ

ರಾಷ್ಟ್ರಗಳಲ್ಲಿ ಕೈಗಾರಿಕಾ ಬೆಳವಣಿಗೆಗೆ ಮಹತ್ವ ನೀಡಿದವು. ೧೭೭೩ರಲ್ಲಿ ಇಂಗ್ಲೇಂಡ್‌ನ ಜೆಮ್ಸ್ ಕೇ ಎಂಬ ವಿಜ್ಞಾನಿ ಹತ್ತಿ ಗಿರಣಿಗೆ 'ಪ್ಲೈನಿಂಗ್ ಶಟಲ್' ಎಂಬ ಯಂತ್ರವನ್ನು ಜೋಡಿಸಿದ್ದು ಉತ್ಪಾದನೆಯಲ್ಲಿ ಕ್ರಾಂತಿಯಾಯಿತು. ಅಲ್ಲಿದ್ದ ಕಬ್ಬಿಣ ಉಕ್ಕು ಕಲ್ಲಿದ್ದಲು ಗಣಿಗಳು ರೈಲು ಹಡಗು ಮುಂತಾದವುಗಳ ಕಾರ್ಖಾನೆಗಳಲ್ಲಿ ಕ್ಷಿಪ್ರ ಬದಲಾವಣೆಗಳಾದವು ಈ ಕಾಲ ಘಟ್ಟವನ್ನು ಆರ್ಥಿಕ ತಜ್ಞರು 'ಕೈಗಾರಿಕಾ ವಲಯದ ವಿಕಾಸ' ಆರ್ಥಿಕ ವಿಕಾಸ' ಎಂದೆಲ್ಲ ಪ್ರತಿಪಾದಿಸಿದರು ಅದು ನಿಜವೇ ಆದರೂ ಅದರ ಬೆನ್ನ ಹಿಂದೆಯೇ ಅನೇಕ ಸಾಮಾಜಿಕ ಸಮಸ್ಯೆಗಳು ಉದ್ಭವವಾದವು ಕೃಷಿ ಕಾರ್ಮಿಕರು ನಗರಗಳಿಗೆ ವಲಸೆ ಹೋಗತೊಡಗಿದರು. ಬಂಡವಾಳಶಾಹಿಗಳು ಕಾರ್ಮಿಕರು ಎಂಬ ಎರಡು ವರ್ಗಗಳು ಸಮಾಜದಲ್ಲಿ ಹುಟ್ಟುಕೊಂಡಿತು ಈ ಎರಡು ವರ್ಗಗಳ ನಡುವೆ ಆರ್ಥಿಕ ಅಸಮಾನತೆ ಹೆಚ್ಚಾಯಿತು ಕಾರ್ಮಿಕರು ಕೈಗಾರಿಕೆಗಳ ಅನಾರೋಗ್ಯಕರ ವಾತಾವರಣದಲ್ಲಿ ಬದುಕ ಬೇಕಾಗಿ ಬಂತು ಅನೇಕ ರೋಗರುಜಿನಗಳಿಗೆ ತುತ್ತಾದರು. ಬಂಡವಾಳಶಾಹಿಗಳು ದೊಡ್ಡ ದೊಡ್ಡ ಕೈಗಾರಿಕೆಗಳ ಮಾಲೀಕರಾಗಿ ಕಾರ್ಮಿಕ ವರ್ಗವನ್ನು ಶೋಷಿಸತೊಡಗಿದರು. ಅವರು ಉತ್ಪಾದನೆಯಲ್ಲಿ ಹೆಚ್ಚಳವಾಗುವ ಕಡೆ ಗಮನಹರಿಸಿದರೇ ಹೊರತು ಕಾರ್ಮಿಕರ ಯೋಗಕ್ಷೇಮ ಕಲ್ಯಾಣದ ಕಡೆ ಗಮನಹರಿಸಲೇ ಇಲ್ಲ ಈ ಆರ್ಥಿಕ ಅಸಮಾನತೆಯೇ ಕಾರ್ಮಿಕರ ಸಂಘಟಿತರಾಗುವ ಮನೋಭಾವನೆಯನ್ನು ಬೆಳಸಿ ಕಾರ್ಮಿಕ ಸಂಘಗಳ ಉದಯಕ್ಕೆ ಕಾರಣವಾಯಿತು. ಈ ಕಾರ್ಮಿಕ ಸಂಘಗಳು ಮಾಲೀಕರ ವಿರುದ್ಧ ತಿರುಗಿ ಬಿದ್ದವು. ಇದೇ ವರ್ಗ ಸಂಘರ್ಷಕ್ಕೆ ಎಡೆಯಾಯಿತು. ಇದೇ ಕಾಲಕ್ಕೆ ಮಾರ್ಕ್ಸ್ ಏಂಗಲ್ಸ್ ಅವರುಗಳ ತಮ್ಮ ವೈಜ್ಞಾನಿಕ ಸಮಾಜವಾದವನ್ನು ಮಂಡಿಸಿ ಕಾರ್ಮಿಕ ಕ್ರಾಂತಿಗೆ ಬೆಂಗಾವಲಾಗಿ ನಿಂತರು. ಕಾರ್ಮಿಕ ರಾಜ್ಯದ ಕನಸ್ಸು ಕಟ್ಟಿದರು ಇದರಿಂದ ಸಮತಾವಾದ ಅಥವಾ ಮಾರ್ಕ್ಸ್‌ವಾದ ಎಂಬ ಹೊಸ ತತ್ವಜ್ಞಾನ ಶೋಷಿತರಿಗೆ ದನಿಯಾಯಿತು. ಮಾರ್ಕ್ಸ್ ಏಂಗಲ್ಸ್ ಜೊತೆಗೂಡಿ ಬರೆದ 'ಕಮ್ಯೂನಿಷ್ಟ್ ಮ್ಯಾನಿಪೆಸ್ಟೊ' ಕೃತಿ ದುಡಿಯುವ ವರ್ಗದ ಜನತೆಯ ಮಾರ್ಗ ಸೂಚಿಯಾಯಿತು ಮಾರ್ಕ್ಸ್‌ನ ಬಂಡವಾಳ ಕೃತಿ ಸಂಪುಟಗಳು ಆರ್ಥಿಕ ಅಸಮಾನತೆಯ ವಿರುದ್ಧ ಯುದ್ಧ ಸಾರಿದವು. ಇವೆಲ್ಲ ಬೆಳವಣಿಗೆಗಳು ವಿಶ್ವದ ಶ್ರಮ ಜೀವಿಗಲನ್ನು ಒಂದು ಗೂಡಿಸುವಲ್ಲಿ ಯಶಸ್ವಿಯಾದವು.

ಜಗತ್ತಿನ ಪ್ರಗತಿ ಶೀಲ ಸಾಹಿತ್ಯ ಚಳುವಳಿಯಲ್ಲಿ ರಷ್ಯಾದ ನೆಲೆ ವಿಶಿಷ್ಟವಾದುದು ಮಾಕ್ಸಿಂಗಾರ್ಕಿಯ Mother ಆ ನಿಟ್ಟಿನಲ್ಲಿ ಗಮನಾರ್ಹವಾದ ಸೃಜನಶೀಲ ಕೃತಿ ಕಾರ್ಮಿಕ ವರ್ಗದ ಜನರ ನೋವು ನಲಿವು ಬದುಕಿನ ಬವಣೆಗಳನ್ನು ಈ ಕಾದಂಬರಿ ಜಗತ್ತಿಗೆ ಸಾರಿತು ಆ ಕಾಲಕ್ಕಾಗಲೇ ಯೂರೋಪಿನ ರಾಜಕೀಯ ಚಳವಳಿ ಚರಿತ್ರೆಯಲ್ಲೇ ಅಲ್ಲದೆ, ವಿಶ್ವದ ರಾಜಕೀಯ ಚರಿತ್ರೆಯನ್ನು ಮೀರುವ ಕ್ರಿಯೆಯಲ್ಲಿ ತೊಡಗಿದ್ದರೂ ಮಾರ್ಕ್ಸ್‌ನ ವಿಚಾರಧಾರೆಗಳನ್ನು ಮುಂದುವರಿಸುವ ವಾರಸುದಾರರಾಗಿ ಅವರು ಕೆಲಸ ಮಾಡಿದರು. ಸಾಹಿತ್ಯ ಯೂರೋಪಿನ ಸಾದ್ಯತೆ ಆಯಾ ಕಾಲದ ರಾಜಕೀಯ ಸಾಮಾಜಿಕ ಬದಲಾವಣೆಗಳ ಜೊತೆಯಾಗಿ ನಿಂತಿತು

ಯೂರೋಪಿನಲ್ಲಿ ಹೊಸದಾಗಿ ಉದ್ಭವವಾಗಿದ್ದ ಕಾರ್ಮಿಕ ವರ್ಗದ ಹಿತಾಶಕ್ತಿಯನ್ನು ಎತ್ತಿ ಹಿಡಿಯುವ ಕೆಲಸಕ್ಕೆ ಮಾರ್ಕ್ಸ್‌ವಾದಿ ದುರೀಣರು ಲೇಖಕರು ಪಣತೊಟ್ಟು ನಿಂತಿದ್ದರು. ೧೮ನೇ ಮತ್ತು ೧೯ನೇ ಶತಮಾನದ ಅವಧಿಯಲ್ಲಿ ಜಗತ್ತು ಎದುರಿಸಿದ ಬಡತನ ಶೋಷಣೆ ವಸಹಾತು ಸಾಮ್ರಾಜ್ಯಶಾಹಿ ಮಹಾಯುದ್ಧಗಳು ಕ್ಷಾಮ ಮುಂತಾದ ಅನಿಷ್ಟಗಳು ವಿರುದ್ಧ ಹೋರಾಡುವ ರಾಜಕೀಯ ಸಂಘಟನೆಯೊಂದನ್ನು ಮಾರ್ಕ್ಸ್ ಬಿಟ್ಟು ಹೋದನು.

೧೯ನೇ ಶತಮಾನದ ಕೊನೆ ೨೦ನೇ ಶತಮಾನದ ಆರಂಭದಲ್ಲಿ ಮಾರ್ಕ್ಸ್‌ವಾದಿ ರಾಜಕೀಯ ಪಕ್ಷಗಳಿಗೆ ಮತ್ತು ಮಾರ್ಕ್ಸ್‌ವಾದಿ ಲೇಖಕರಿಗೆ ಮನ್ನಣೆ ದೊರೆಯಿತು ಜಗತ್ತು ಸಹ ಅಂಥ ಹೊಸ ಸಮಾಜವನ್ನು ಸ್ವಾಗತಿಸಲು ಸಿದ್ಧವಾಗಿ ನಿಂತಿತ್ತು ಅದು ಚಾರಿತ್ರಿಕ ಅನಿವಾರ್ಯವೂ ಸಹ ಆಗಿದ್ದುದ್ದರಿಂದ ರಷ್ಯಾದಲ್ಲಿ ೧೯೧೭ರಲ್ಲಿ ಅಕ್ಟೋಬರ್ ಕ್ರಾಂತಿಗೆ ಜಯಲಭಿಸಿತು. ಇದು ಬಹುಶಃ ಜಗತ್ತಿನ ಕಾರ್ಮಿಕ ಕ್ರಾಂತಿಯ ಮೊದಲ ಪೂರ್ಣ ಪ್ರಮಾಣದ ಜಯ ಎನ್ನಬಹುದು. "ಈ ಕ್ರಾಂತಿ ರಷ್ಯಾಕ್ಕೆ ಮಾತ್ರ ಮೀಸಲಾಗಲಿಲ್ಲ. ಇದರ ಫಲ ಮಾನವ ಕುಲಕ್ಕೆಲ್ಲ ಲಭ್ಯವಾಯಿತು ಎಲ್ಲಿ ಮಾನವ ಮಾನವನನ್ನೆ ಸೂರೆ ಮಾಡುತ್ತಿದ್ದನೋ ಅಲ್ಲೆಲ್ಲ ಈ ಕ್ರಾಂತಿಯ ಪ್ರಭಾವ ಬಿತ್ತು ಈ ಕ್ರಾಂತಿಯು ಅಂತರರಾಷ್ಟ್ರಿಯ ಶಕ್ತಿಯಾಯಿತು. ಎಲ್ಲಿ ಜನರು ಗುಲಾಮಗಿರಿಗೆ ತುತ್ತಾಗಿದ್ದರೋ ಎಲ್ಲಿ ಸಾಮ್ರಾಜ್ಯಶಾಹಿ ಮೆರೆಯುತ್ತಿತ್ತೋ, ಎಲ್ಲಿ ವಸಹಾತುಶಾಹಿಯ ಯಾತನೆಗೆ ಜನ ಗುರಿಯಾಗಿದ್ದರೋ ಎಲ್ಲಿ ಶ್ರೀಮಂತರು ಸಮಸ್ತರನ್ನೂ ಸೂರೆ ಮಾಡಿ ಅವರ ರಕ್ತ ಹೀರುತ್ತಿದ್ದರೋ ಅಲ್ಲೆಲ್ಲ ಈ ಕ್ರಾಂತಿಯ ಪ್ರವೇಶವಾಯಿತು" ಅಲ್ಲಿಂದ ರಷ್ಯಾ ಮಾರ್ಕ್ಸ್ ಸಿದ್ಧಾಂತದ ಪ್ರಣಾಳಿಕೆಯುಳ್ಳ ಮುಳ್ಳು ರಾಜಕೀಯ ಸಂಘಟನೆಯನ್ನು ಮಾರ್ಕ್ಸ್ ಸಿದ್ಧಾಂತವನ್ನು ಎತ್ತಿ ಹಿಡಿಯುವ ಹಾಗೂ ಮಾರ್ಕ್ಸ್‌ವಾದಿ ಸಾಹಿತ್ಯವನ್ನು ಪ್ರೋತ್ಸಾಹಿಸುವ ಕೆಲಸಕ್ಕೆ ಮುಂದಾಗಿಸಿ ಕೊಂಡಿತು ಹೆಚ್ಚಾಗಿ ಯೂರೋಪ್ ಮತ್ತು ಏಷ್ಯಾದ ರಾಷ್ಟ್ರಗಳಲ್ಲಿನ ಸ್ವಾತಂತ್ರ್ಯ ಮತ್ತು ಕಾರ್ಮಿಕ ಹೋರಾಟದ ನಾಯಕತ್ವವನ್ನು ವಹಿಸಿಕೊಳ್ಳುವ ಕೆಲಸವನ್ನು ಅದು ಮಾಡಲು ಮುಂದಾಯಿತು.

ಈ ನಿಟ್ಟಿನಲ್ಲಿ ಮಾಕ್ಸಿಂಗಾರ್ಕಿ ಅವರ ಮದರ್ ಕಾದಂಬರಿ ಇಡೀ ವಿಶ್ವದ ಮಾರ್ಕ್ಸ್‌ವಾದಿ ಲೇಖಕರಿಗೆ ಮಾದರಿಯಾಯಿತು. ಮೊದಲಬಾರಿಗೆ Working class ನ ಬದುಕಿನ ಬವಣೆಯನ್ನು ಚಿತ್ರಿಸಿದ್ದು ಈ ಕಾದಂಬರಿಯ ಹೆಗ್ಗಳಿಕೆ ಈ ಕಾದಂಬರಿಯ ಆಶಯಗಳೇ ವಿಶ್ವಸಾಹಿತ್ಯಕ್ಕೆ ಮಾದರಿಯಾಯಿತು ರಷ್ಯಾ ಸಾಹಿತ್ಯವಲ್ಲದೆ ರಾಜಕೀಯ ಆರ್ಥಿಕ ಹಾಗೂ ಸಾಮಾಜಿಕ ಬದಲಾವಣೆಗೆ ಅಕ್ಟೋಬರ್ ಕ್ರಾಂತಿಯ ನಂತರ ಮುಂದಾಯಿತು ಲೆನಿನ್ ಈ ಎಲ್ಲದರ ನಾಯಕತ್ವ ವಹಿಸಿದರು. ಸಾಹಿತ್ಯದಲ್ಲಿ ಅದರ ಸ್ಥಾನ ಗಾರ್ಕಿಗೆ ಸಲ್ಲಬೇಕು.

Working Class ಕಾದಂಬರಿಯ ವಸ್ತುವಾಗುವುದು ಆ ಕಾಲದ ಸಾಹಿತ್ಯ ಪರಂಪರೆಗೆ ತೀರ ಹೊಸದಾದ ವಿಚಾರವೇ ಆಗಿತ್ತು ಮ್ಯಾಕ್ಸಿಗಾರ್ಕಿ ಅದನ್ನು ತೋರಿಸಿ ಕೊಟ್ಟಿದ್ದರಿಂದ ಯೂರೋಪ್ ಏಷ್ಯಾ ಸಾಹಿತಿಗಳು ಆ

ದಾರಿಯಲ್ಲಿ ನಡೆದರು. ಗಾರ್ಕಿಯ ಸಮಾಕಾಲೀನ ಇಂಗ್ಲೀಷ್ ಲೇಖಕರಲ್ಲಿ ಡಿಕೇನ್ಸ್ ಜಾರ್ಜ್ ಇಲಿಯಟ್ ಪ್ರಮುಖರು ಈ ಇಬ್ಬರು ವರ್ಕಿಂಗ್ ಕ್ಲಾಸ್ ಅನ್ನು ಕುರಿತು ಬರೆದರು ಆದರೆ ಗಾರ್ಕಿಗೆ ಸಿಕ್ಕ ವಿಶ್ವ ಮನ್ನಣೆ ಇವರಿಗೆ ಸಿಗಲ್ಲ ಆದರೂ ಅವರ ಬಹುತೇಕ ಕೃತಿಗಳು ಜಗತ್ತಿನ ಪ್ರಗತಿಶೀಲ ಸಾಹಿತ್ಯ ಚಳುವಳಿಗೆ ಸಾಕಷ್ಟು ಪ್ರೇರಣೆ ನೀಡಿದರು. ರಷ್ಯಾದಲ್ಲಿ ಗಾರ್ಕಿಗೂ ಮೊದಲು ಬರೆಯುತ್ತಿದ್ದ ಟಾಲ್‌ಸ್ಟಾಯ್ ದಸ್ಕೋವಸ್ಕಿ ಅವರ ಸಾಹಿತ್ಯ ಕೊಡುಗೆಯನ್ನು ಸ್ಮರಿಸಲೇ ಬೇಕು ಟಾಲ್‌ಸ್ಟಾಯ್‌ನ War and peace, Annacarancna ದಸ್ಕೊವಸ್ಕಿಯ House of the dead ಮುಂತಾದವು ಹೊಸ ಕಾಲದ ಸಾಹಿತ್ಯ ಚಳುವಳಿಯ ವಾಸನೆಯನ್ನು ಮೈಗೂಡಿಸಿಕೊಂಡಿದ್ದವು ೧೯೩೦ರ ಹೊತ್ತಿಗೆ ಇಂಗ್ಲೇಂಡಿನಲ್ಲಿ ಅಂಥ ಒಂದು ಚಳುವಳಿಗೆ ವೇದಿಕೆ ಸಿದ್ದವಾಗಿ ಮಾರ್ಕ್ಸ್‌ವಾದಿ ಲೇಖಕರು ಒಟ್ಟುಗೂಡಿ ಪ್ರಗತಿಶೀಲ ಸಾಹಿತಿಗಳ ಸಂಘವೊಂದನ್ನು ಹುಟ್ಟು ಹಾಕಿದರು.

ಕೈಗಾರಿಕಾ ಕ್ರಾಂತಿಉಂಟಾಗಿ ಬಂಡವಾಳಶಾಹಿ ಪ್ರವೃತ್ತಿ ಮೊಳಕೆಯೊಡೆಯಿತು, ಬಂಡವಾಳಶಾಹಿಯಿಂದಾಗಿ ಕೈಗಾರಿಕೆಗಳು ಸ್ಥಾಪನೆ, ಕೈಗಾರಿಕೆಗಳ ಸ್ಥಾಪನೆಯಿಂದಾಗಿ ಕಾರ್ಮಿಕವರ್ಗದ ಉದಯ, ಕಾರ್ಮಿಕ ವರ್ಗದ ಉದಯದಿಂದ ಸರಕುಗಳ ಉತ್ಪಾದನೆಯಲ್ಲಿ ಹೆಚ್ಚಳ, ಸರಕುಗಳ ಉತ್ಪಾದನೆಯಿಂದಾಗಿ ಹೊಸ ಮಾರಕಟ್ಟೆಗಳ ವಿಸ್ತರಣೆ ಪ್ರಯತ್ನ, ಹೊಸ ಮಾರುಕಟ್ಟೆಗಳ ವಿಸ್ತರಣೆಯಿ ಪ್ರಯತ್ನದ ಫಲವಾಗಿ ಭೂ ಖಂಡಗಳ ಸಂಶೋಧನೆ, ಭೂಖಂಡಗಳ ಶೋಧನೆಯಿಂದಾಗಿ ವಸಹಾತುವಿನ ಪೈಪೋಟಿ, ವಸಹಾತು ಪೈಪೋಟಿಯಿಂದಾಗಿ ಮೊದಲ ಮಹಾಯುದ್ಧ ಮತ್ತೆ ಮುಂದುವರೆದು ವಸಹಾತು ಸ್ಥಾಪನೆಯಿಂದ ಸಾಮ್ರಾಜ್ಯವಾದದ ಉದಯ, ಸಮ್ರಾಜ್ಯವಾದಿಂದಾಗಿ ಎರಡನೇ ಮಹಾಯುದ್ಧ ಯುದ್ಧಗಳಿಂದಾಗಿ ಕೃತಕ ಬರಗಾಲ ಕೃತಕ ಬರಗಾಲದಿಂದ ಹಸಿವು. ಹೀಗೆ ಜಗತ್ತಿನ ಸಂದರ್ಭದಲ್ಲಿ ಶ್ರೇಣಿಕೃತವಾಗಿ ಸಮಸ್ಯೆಗಳು ಉದ್ಭವವಾದವು. ಹೀಗೇ ಆರಂಭವಾದ ಸಾಮಾಜಿಕ ವಿಷಮತೆಗಳಿಗೆ ಬಂಡವಾಳಶಾಹಿ ಯಜಮಾನ್ಯವೇ ಮೂಲ ಕಾಲಣವಾಗಿತ್ತು ಎಂಬುದನ್ನು ನೆನಪಿನಲ್ಲಿಟ್ಟು ಕೊಳ್ಳಬೇಕು.

ಹೀಗೆ ಯುರೋಪ್ ಏಷ್ಯಾ ದೇಶಗಳು ಮಾರ್ಕ್ಸ್‌ವಾದಿ ಅಲೆಯ ರಾಜಕೀಯ ಸಾಹಿತ್ಯದ ಪ್ರಗತಿಯಲ್ಲಿ ತೊಡಗಿದ್ದಾಗಲೇ ಒಂದನೇ ಜಾಗತಿಕ ಮಹಾಯುದ್ಧ ಜರುಗಿ ವಿಶ್ವವನ್ನೇ ಅಲ್ಲೋಲ ಕಲ್ಲೋಲ ಮಾಡಿತು ಬಡರಾಷ್ಟ್ರಗಳ ಈ ಹೊಡೆತಗಳನ್ನು ಸಹಿಸಿಕೊಳ್ಳಲು ಕಷ್ಟವಾಗಿ ಅನಾರೋಗ್ಯ ಬಡತನ ಹಸಿವು ಮುಂತಾದ ಕಷ್ಟ ಕಾರ್ಪಾಣ್ಯಕ್ಕೆ ಒಳಗಾದವು ಅಮೇರಿಕಾ ರಷ್ಯಾ ಇಂಗ್ಲೇಡ್ ಪ್ರಾನ್ಸ್ ಮುಂತಾದ ಬಲಿಷ್ಠ ರಾಷ್ಟ್ರಗಳ ಸಾಮ್ರಾಜ್ಯಶಾಹಿಗಳಾಗಿ ಮೆರೆಯಲು ತುದಿಗಾಲಲ್ಲಿ ನಿಂತವು ಆದರೆ ರಷ್ಯಾ, ಕಮ್ಯುನಿಸ್ಟ್ ಸಿದ್ಧಾಂತದ ರಾಜಕೀಯ ನೆಲೆಯನ್ನು ತಲುಪುವ ಕ್ರಾಂತಿಗೂ ಅವಕಾಶ ಕಲ್ಪಿಸಿತು ಹಾಗೆಯೇ ೧೯೧೭ರ ಕ್ರಾಂತಿಯಿಂದಾಗಿ ಸಾಮ್ರಾಜ್ಯಶಾಹಿ ವಸಾಹತುಶಾಹಿಗಳ ವಿರುದ್ಧ ನಿಂತಿತು ಈ ನಿಟ್ಟಿನಲ್ಲಿ ವಿಶ್ವದ ಮಾರ್ಕ್ಸ್‌ವಾದಿ ಸಾಹಿತ್ಯ ವೂ ಇಂಥ Unjust

Policy of cruntries ವಿರುದ್ಧ ದನಿ ಎತ್ತ ತೊಡಗಿತು ಹಾಗಾಗಿ ಜಗತ್ತಿನ ಬಹುತೇಕ ಶೋಷಿತ ರಾಷ್ಟ್ರಗಳು ಸ್ವಾತಂತ್ರ್ಯವಾಗಿ ದನಿ ಎತ್ತ ತೊಡಗಿದವು ಅದರಲ್ಲಿ ಭಾರತವೂ ಒಂದು 2ನೇ ಮಹಾಯುದ್ಧ ಜರುಗಿ ವಿಶ್ವವನ್ನೂ ಮತ್ತೊಂದು ಬಾರಿಗೆ ಗಂಡಾಂತರಕ್ಕೆ ತಳ್ಳಿತು ಅಷ್ಟಾದರೂ ಚಾರಿತ್ರಿಕ ಕಾಲ ಘಟ್ಟದಲ್ಲಿ ಈ ಯುದ್ಧಗಳು ಅನಿವಾರ್ಯವೇ ಆಗಿದ್ದವು ಇಟಲಿ ಜರ್ಮನಿ ಮುಂತಾದ ಪ್ಯಾಸಿಸ್ಟ್ ಧೋರಣೆಯ ದೇಶಗಳ ಮೂರ್ಖತನ ಅಹಂಕಾರಗಳು ಈ ಯುದ್ಧವನ್ನು ಆಹ್ವಾನಿಸಿದವೆನ್ನಬಹುದು ಈ ಎಲ್ಲಾ ಚಾರಿತ್ರಿಕ ಘಟನೆಗಳ ಸಂದರ್ಭದಲ್ಲಿ ಪ್ರಗತಿಶೀಲ ಸಾಹಿತ್ಯ ಚಳುವಳಿ ಪರಿಕಲ್ಪನೆ ಹುಟ್ಟಿಕೊಂಡಿತು. ಹೀಗೆ ಜಗತ್ತಿನ ಚಾರಿತ್ರಿಕ ಇತಿಹಾಸ ಪ್ರಗತಿಶೀಲ ಸಾಹಿತ್ಯದ ಮೇಲೆ ಪ್ರಭಾವ ಬೀರಿದೆ ಎನ್ನಬಹುದು.

### ಅಡಿ ಟಿಪ್ಪಣಿ

೧. ಹೆಚ್. ಎಸ್. ರಾಘುವೇಂದ್ರರಾವ್: ಪ್ರಗತಿಶೀಲತೆ : ಕರ್ನಾಟಕ ಸಾಹಿತ್ಯ ಅಕಾಡೆಮಿ: ೧೯೨ರ ಪುಟಳ

೨. ತೀ. ತಾ ಶರ್ಮ: ರಷ್ಯನ್ ಸಾಹಿತ್ಯ ಪರಿಚಯ : బెంగళూరు ವಿಶ್ವವಿದ್ಯಾನಿಲಯ, ಬೆಂಗಳೂರು. ೧೯೭೮ ಪುಟಲ

* * * * * *

ಅಧ್ಯಾಯ - ೩

# ಕನ್ನಡದಲ್ಲಿ ಪ್ರಗತಿಶೀಲ ಸಾಹಿತ್ಯದ ಒಲವು ನಿಲುವುಗಳು

ಚಲನಶೀಲವಾದ ಬದುಕಿನಲ್ಲಿ ಬದಲಾವಣೆ ತೀರ ಸಹಜ. ಅದು ಜೀವಂತಿಕೆಯ ಲಕ್ಷಣ ಸಹ. ಅಂತೆಯೇ ಸಾಹಿತ್ಯದಲ್ಲೂ ಕಾಲಕಾಲಕ್ಕೆ ಬದಲಾವಣೆ ನಡೆಯುತ್ತದೆ. ಒಂದು ರೀತಿ ಬರವಣಿಗೆ ತನ್ನ ಸತ್ವವನ್ನು ಕಳೆದುಕೊಂಡು ಉತ್ಸಾಹ, ಶಕ್ತಿ ಕಡಿಮೆಯಾಗುತ್ತದೆ. ಅದಕ್ಕೆ ಪ್ರತಿಭಟನೆಯೆಂಬಂತೆ ಹೊಸರೀತಿಯ ಬರವಣಿಗೆ ಚಲಾವಣೆಗೆ ಬರುತ್ತದೆ. ಕ್ರಮೇಣ ಅದೂ ಒಂದು ಸಂಪ್ರದಾಯವಾಗಿ ಇನ್ನೊಂದು ರೀತಿಗೆ ಹಾದಿ ಮಾಡಿಕೊಡುತ್ತದೆ. ತನ್ನ ಸ್ವರೂಪವನ್ನು ಬದಲಾಯಿಸಿಕೊಳ್ಳುತ್ತಾ ತಾತ್ಕಾಲಿನತೆಗೆ ಸ್ಪಂದಿಸಿ ಸಮಕಾಲೀನ ಅಗತ್ಯಕ್ಕೆ ತಕ್ಕಂತೆ ರೂಪುಗೊಳ್ಳುತ್ತಾ ಹೋಗುತ್ತದೆ.

ಈ ಶತಮಾನದ ಆರಂಭದಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಹತ್ವದ ಬದಲಾವಣೆಯೊಂದು ಘಟಿಸಿತು. ಕ್ರಿ.ಶ. ೧೭೦೦ ರಿಂದ ಸ್ಥಗಿತಗೊಂಡಿದ್ದ ಕನ್ನಡ ಸಾಹಿತ್ಯಕ್ಕೆ ಹೊಸ ಕಾಯಕಲ್ಪ ನಡೆಯಿತು. ಪಂಡಿತರ ಸ್ವತ್ತಾಗಿದ್ದ ಜೀವಂತಿಕೆ ಕಳೆದುಕೊಂಡಿದ್ದ ಕನ್ನಡ ಸಾಹಿತ್ಯದಲ್ಲಿ ಹೊಸ ಜೀವ ಸಂಚಾರವಾಯಿತು. ೧೯೨೧ರಲ್ಲಿ ಪ್ರಕಟವಾದ ಬಿಎಂಶ್ರೀ ಅವರ 'ಇಂಗ್ಲೀಷ್ ಗೀತೆಗಳು' ಈ ದೃಷ್ಟಿಯಿಂದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಐತಿಹಾಸಿಕ ಘಟನೆ. ಭಾರತದ ಸ್ವಾತಂತ್ರ್ಯ ಹೋರಾಟ ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆಗಳು ಕನ್ನಡ ಸಾಹಿತ್ಯದ ಮೇಲೆ ಗಾಢ ಪ್ರಭಾವ ಬೀರಿ ಸಾಹಿತ್ಯದ ಮೂಲ ಸ್ವರೂಪವೇ ಬೇರೆಯಾಯಿತು. ಬಿಎಂಶ್ರೀ ಅವರಿಂದ ಆರಂಭಗೊಂಡು ಬೇಂದ್ರೆ, ಕುವೆಂಪು, ಪುತಿನ. ಮೊದಲಾದವರ ಮೂಲಕ ಬೆಳೆದು ತಮ್ಮದೇ ನೆಲೆಗಳನ್ನು ಪಡೆಯುತ್ತಾ ಗಟ್ಟಿಗೊಳ್ಳುತ್ತಿರುವಾಗಲೇ ಪ್ರಗತಿಶೀಲ ಸಾಹಿತ್ಯ ಚಳುವಳಿ ಅಂಕುರಾರ್ಪಣೆಯಾಯಿತು.

"ಕನ್ನಡ ಸಾಹಿತ್ಯ ಎದುರಿಸಿದ ಮೊದಲ ವಾದವಾಗಿ ಪ್ರಗತಿಶೀಲ ಚಳುವಳಿ ನಮಗೆ ಕಂಡು ಬರುತ್ತದೆ."[೧] ಈ ದೆಶೆಯಲ್ಲಿ ಪ್ರಗತಿಶೀಲ ಸಾಹಿತ್ಯ ಚಳುವಳಿ ನವೋದಯಕ್ಕೆ ಪ್ರತಿಕ್ರಿಯೆಯಾಗಿ ಬಂದಿತೆಂಬುದನ್ನು ಗಮನಿಸಬೇಕು. ಆದರ್ಶ, ಆಕಾಶದತ್ತ ನೋಟ, ಕಲ್ಪನಾದ್ಭುತಗಳಲ್ಲಿ ಮೈಮರೆತು ತನ್ನಷ್ಟಕ್ಕೆ ತಾನೇ ಹಾಡಿಕೊಳ್ಳುತ್ತಿದ್ದ ನವೋದಯವನ್ನು ಕಟುವಾಗಿ ಟೀಕಿಸುತ್ತಾ ಅಸ್ತಿತ್ವಕ್ಕೆ ಬಂದಿತೆಂದು ಹೇಳಲಾಗುವ ಈ ಸಾಹಿತ್ಯ ಚಳುವಳಿ ಅತ್ಯಲ್ಪ ಕಾಲದಲ್ಲಿಯೇ ತನ್ನ ಬಿರುಸು ಬಡಿದಾಟಗಳಿಂದ ಎಲ್ಲರ ಗಮನ ಸೆಳೆಯಿತು. ಹಾಗೆಯೇ ಬಂದಷ್ಟೆ ವೇಗದಲ್ಲಿ ತನ್ನ ಸೂಕ್ಷ್ಮತೆಯನ್ನು ಕಳೆದುಕೊಂಡು ಬಿಟ್ಟಿತು.

ಸಾಹಿತ್ಯ ಪ್ರಚಾರದ ಸಾಧನವಾದಾಗ ಆಗುವ ದುರಂತಗಳು ಮತ್ತು ಸಾಹಿತ್ಯದೊಳಗಿನ ಪ್ರಚಾರ ಸಾಧನಗಳಿಂದ ಅಂಶಗಳು ಎರಡೂ ಪ್ರಗತಿಶೀಲರ ಕಾಲದಲ್ಲಿ ಅನಾವರಣಗೊಂಡಿದ್ದ ರೀತಿ ಅದರಲ್ಲೂ ಕಥಾ ಸಾಹಿತ್ಯವೊಂದನ್ನು ಬಳಸಿಕೊಂಡ ಬಗೆಯಲ್ಲಿ ಇಷ್ಟಾದರೂ ಬದಲಾವಣೆಯನ್ನು ಬಯಸುವ ಮನಸ್ಸುಗಳ ಹಿಂಡೇ ಆ ಕಾಲದಲ್ಲಿ

ಜಾಗೃತವಾಗಿದ್ದು ಪ್ರಮುಖ ಅಂಶ ಎಂದೆನಿಸುತ್ತದೆ. ಈ ಹಿನ್ನೆಲೆಯಲ್ಲಿ ಪ್ರಗತಿಶೀಲ ಸಾಹಿತ್ಯದ ಧೋರಣೆಗಳು ರೂಪುಗೊಂಡಿರುವ ಸಾಧ್ಯತೆಯನ್ನು ಪ್ರಗತಿಶೀಲರ ಹೇಳಿಕೆಗಳ ಮೂಲಕವೇ ಗಮನಿಸಬಹುದು.

"ಜೀವನ ಹಸನಾಗಬೇಕು, ಬಾಳು ಸಹ್ಯವಾಗಬೇಕು, ಮಾನವನಿಗೆ ಅವನ ನಿಜಾತ್ಮವ ಅರಿವಾಗಬೇಕೆಂಬುದೇ ಎಲ್ಲಾ ಪ್ರಗತಿಶೀಲ ಸಾಹಿತಿಗಳ ಬಯಕೆ."[೨]

"ಪ್ರಗತಿಶೀಲ ಸಾಹಿತಿಗಳ ಗುರಿ ಕೇವಲ ಸಹಜವಾದ ಸಾಹಿತ್ಯವನ್ನು ನಿರ್ಮಾಣ ಮಾಡುವುದೇ ಅಲ್ಲ. ಸಾಹಿತ್ಯದಲ್ಲಿ ನೈಸರ್ಗಿಕತೆಯೂ ಇರಬೇಕು. ಅಜೇಯ ಶಕ್ತಿಯೂ ಇರಬೇಕು. ಅದು ನಮ್ಮ ಜನತೆಯ ಸಂಸ್ಕೃತಿಯ ಆಸೆ, ಆಶಯ, ಸುಖದುಃಖಗಳ ಕನ್ನಡಿಯಾಗಿರಬೇಕು. ಸಾಹಿತ್ಯ ಜನತೆಯ ಮಾರ್ಗದರ್ಶಕನಾಗಬೇಕು"[೩] -ಈ ಅವತರಣಿಕೆಗಳು ಕನ್ನಡ ಪ್ರಗತಿಶೀಲ ಸಾಹಿತ್ಯದ ಲಕ್ಷಣವನ್ನು ಅದರ ಧ್ಯೇಯವನ್ನು ತಿಳಿಸುವಂತಾದ್ದಾಗಿದೆ.

೧೯೪೩ ಡಿಸೆಂಬರ್‌ನಲ್ಲಿ ಕನ್ನಡ ನಾಡಿನ ಪ್ರಗತಿಶೀಲ ಬರಹಗಾರರ ಸಭೆ ಅಸ್ತಿತ್ವಕ್ಕೆ ಬಂದಿತು. ಅನಕೃ ಇದರ ಅಧ್ಯಕ್ಷರಾದರು. ಆ ತಿಂಗಳಲ್ಲೇ ಶಿವಮೊಗ್ಗದಲ್ಲಿ ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಕರ್ನಾಟಕದ ಪ್ರಗತಿಶೀಲ ಲೇಖಕರ ಕೂಟ ಜರುಗಿತು. ಇದರಲ್ಲಿ ಭಾಗವಹಿಸಿದ್ದ ಕುಮಾರ ವೆಂಕಣ್ಣ, ಅನಂತನಾರಾಯಣ, ಅರ್ಚಕ ವೆಂಕಟೇಶ, ನಾಡಿಗೇರ ಕೃಷ್ಣರಾಯ, ಅನಂತ ಪದ್ಮನಾಭ, ತ.ರಾ. ಸುಬ್ಬರಾವ್, ಬಸವರಾಜ ಕಟ್ಟಿಮನಿ, ನಿರಂಜನ ಮೊದಲಾದವರು ನಾಡಿನ ಉದ್ದಗಲಕ್ಕೂ ಸಂಚರಿಸಿ ಸಂಘಟನೆಯ ಪ್ರಯತ್ನ ಮಾಡಿದರು. ತಮ್ಮ ನಿಲುವು ಉದ್ದೇಶಗಳನ್ನು ತಿಳಿಸುವ ವೇದಿಕೆಗಳನ್ನು ನಿರ್ಮಿಸಿಕೊಂಡರು. ಕರ್ನಾಟಕದ ಪ್ರಗತಿಶೀಲ ಲೇಖಕ ಸಂಘ ಕೆಲವು ಪುಸ್ತಕಗಳನ್ನು ಪ್ರಕಟಿಸಿತು.

"ಹಾಗೆ ನೋಡಿದರೆ ಈ ಬಗೆಯ ಸಾಹಿತ್ಯ ಭಾರತೀಯ ಭಾಷಾ ಸಾಹಿತ್ಯಗಳ ಪೈಕಿ ಮೊದಲು ಕಾಣಿಸಿಕೊಂಡಿದ್ದು ಹಿಂದಿಯಲ್ಲಿ. ೧೯೩೬ ರಿಂದಲೇ ಚಳುವಳಿಯ ರೂಪದಲ್ಲಿ ಬೆಳೆದು ಬಂದು ಲಕ್ನೋದಲ್ಲಿ ಜರುಗಿದ ಮೊದಲ ಪ್ರಗತಿಶೀಲ ಲೇಖಕರ ಸಂಘಧ ಅಧಿವೇಶನದಲ್ಲಿ ಪ್ರೇಮ್‌ಚಂದರು ಅಧ್ಯಕ್ಷತೆ ವಹಿಸಿದ್ದರು. ಪ್ರೇಮ್‌ಚಂದ್ ತಮ್ಮ ಕೃತಿಗಳುದ್ದಕ್ಕೂ ಪ್ರಗತಿಶೀಲ ಧೋರಣೆಯನ್ನು ಪ್ರಕಟಿಸಿದ ಹಿರಿಯ ಲೇಖಕರಾಗಿದ್ದರು."[೪] ಸಮತಾವಾದದ ಪರಿಣಾಮವಾಗಿ ರಶಿಯಾದ ಸಾಹಿತ್ಯ ಸಂಪೂರ್ಣವಾಗಿ ಅವಸ್ಥಾಂತರವನ್ನು ಪಡೆಯಿತು.

ಈ ಕ್ರಾಂತಿ ಭಾರತದಲ್ಲಿ ಅದೂ ಭಾರತೀಯ ಜೀವನ ಬಗ್ಗೆ ಇಂಗ್ಲೀಷಿನಲ್ಲಿ ಬರೆಯುವ ಮುಲ್ಕರಾಜ್ ಆನಂದ, ಅಬ್ಬಾಸ್‌ರಂಥವರ ಮೂಲಕ ಸಾಹಿತ್ಯ ಲೋಕವನ್ನು ಪ್ರವೇಶಿಸಿತು. ಅದು ಮೊತ್ತಮೊದಲು ಹಿಂದೀ ಸಾಹಿತ್ಯದಲ್ಲಿ ಪ್ರಗತಿವಾದಕ್ಕೆ ಎಡೆಗೊಟ್ಟಿತು. ಅಲ್ಲಿಂದ ಉಳಿದ ಸಾಹಿತ್ಯಗಳಿಗೂ ಹರಿದು ಬಂದಿತು. "ವಿದ್ಯಾಭ್ಯಾಸಕ್ಕೂ ತೆರಳಿದ ಅಬ್ಬಾಸ್ ಸಜ್ಜಾದ್ ಜಾಹಿರ್, ಮುಲ್ಕರಾಜ್ ಆನಂದ ಮೊದಲಾದ ಮಹನೀಯರು

ಭಾರತಕ್ಕೆ ಬಂದು ತರುವಾಯ ಭಾರತದ ಸ್ವಾತಂತ್ರ್ಯ ಚಳುವಳಿಯ ಬಿಸಿಯೊಟ್ಟಿಗೆ ತಮ್ಮ ವಿದೇಶಿ ಪ್ರೇರಣೆಯ ಸಾಹಿತ್ಯದ ಚಳುವಳಿಯೇ ಹಬ್ಬಿಸಿದರು. ಮೊದಲು ಸಜ್ಜದ್ ಅವರೇ ತಯಾರಿಸಿದ ಪ್ರಣಾಳಿಕೆಯೊಳಗೆ ಪ್ರಗತಿಶೀಲ ಲೇಖಕರ ಸಂಘ ಸ್ಥಾಪಿತವಾಯಿತು. ಮುಂದೆ ನಿಧಾನವಾಗಿ ಭಾರತದ ಎಲ್ಲಾ ಕಡೆಗೂ ಹಬ್ಬತೊಡಗಿದ ಪ್ರಗತಿಶೀಲ ಸಾಹಿತ್ಯದ ಹೊಸ ಹುರುಪು ನವೋದಯದ ಏಕತಾನತೆಯನ್ನು ಹೋಗಲಾಡಿಸುವಲ್ಲಿಯೂ ಸದ್ಯದ ಸಾಂಸ್ಕೃತಿಕ ಬದುಕಿನ ಸ್ಥಿತ್ಯಂತರಗಳಲ್ಲಿ ಗಮರ್ನಾಹ ಪಾತ್ರ ವಹಿಸುವಲ್ಲಿಯೂ ಕಾರಣೀಭೂತವಾಯಿತು. ಆ ಆವೇಶದಲ್ಲಿ ಹೆಚ್ಚು ಕಮ್ಯುನಿಸ್ಟ್ ಸಿದ್ಧಾಂತವನ್ನು ಒಪ್ಪಿಕೊಂಡ ಲೇಖಕರು, ಕಲಾವಿದರು, ಸಾಹಿತ್ಯ ಕಲೆಗಳ ಸೃಷ್ಟಿ ಪ್ರಸಾರದಲ್ಲಿ ಸಮುದಾಯದ ಆಶಯಗಳನ್ನು ಎತ್ತಿ ಹಿಡಿಯತೊಡಗಿದರು. ಈ ನಿಟ್ಟಿನಲ್ಲಿ ೧೯೪೧ರಲ್ಲಿ ರೂಪುಗೊಂಡ ಫ್ಯಾಸಿಸ್ಟ್ ವಿರೋಧಿ ಲೇಖಕರು ಮತ್ತು ಕಲಾವಿದರ ಒಕ್ಕೂಟ ಹಾಗೂ ೧೯೪೩ರಲ್ಲಿ ಸ್ಥಾಪಿತವಾದ IPTA ಕೂಟ ಸಾಕಷ್ಟು ಕೆಲಸ ಮಾಡಿರುವುದನ್ನು ಸ್ಮರಿಸಬೇಕು."೬

ಕನ್ನಡದ ಸಂದರ್ಭದಲ್ಲಿ ಅನಕೃ ನೇತೃತ್ವದ ಬಣ ಸಾಕಷ್ಟು ಆವೇಶ ಮತ್ತು ತಕ್ಕಷ್ಟು ಘೋಷಣೆ, ಪ್ರಚಾರಗಳಿಂದ ಪ್ರಗತಿಶೀಲದ ಗಾಳಿಯನ್ನು ಎಲ್ಲೆಡೆಯಲ್ಲೂ ಪಸರಿಸಲು ಪ್ರಯತ್ನ ಪಟ್ಟಿತು. ವ್ಯಕ್ತಿವಾದಿ ಧೋರಣೆಗಳು ಮತ್ತು ಸೈದ್ಧಾಂತಿಕ ಭಿನ್ನಾಭಿಪ್ರಾಯಗಳ ಕಾರಣವಾಗಿ ಕರ್ನಾಟಕದ ಪ್ರಗತಿಶೀಲ ಲೇಖಕರಲ್ಲಿ ವೈಮನಸ್ಯ ತಲೆದೋರಿತು. "ಈ ಘಟ್ಟದಲ್ಲೇ ಪ್ರಗತಿಶೀಲ ಸಾಹಿತ್ಯದ ಸಂಘಟನೆಯಲ್ಲಿ ಬಿರುಕು ಕಾಣಿಸಿಕೊಂಡಿತು. ಕುಳಕುಂದ ಶಿವರಾಮರ ಬಣ ಸಾಮ್ಯವಾದದ ಹಿನ್ನೆಲೆಯಲ್ಲಿ ನಿಂತರೆ, ಅನಕೃ ಅವರ ಬಣ ಭಾರತೀಯ ಪುನರುಜ್ಜೀವನ ಹಿನ್ನೆಲೆಯಲ್ಲಿ ನಿಂತಿತು. ಸಂಘಟನೆ ವಿಘಟನೆಯ ಹಾದಿ ಹಿಡಿಯಿತು. ಗಾಂಧೀಜಿಯವರ ಕ್ರಿಯಾಶೀಲ ವ್ಯಕ್ತಿತ್ವದ ಪ್ರಖರ ಬೆಳಕಿನೆದುರಲ್ಲಿ ಪ್ರಗತಿಶೀಲ ಸಾಹಿತ್ಯ ಚಳುವಳಿ ಮಂಕಾಯಿತು."೭

ವಾಸ್ತವವಾಗಿ ಕನ್ನಡ ಸಾಹಿತ್ಯದ ಪ್ರಗತಿಶೀಲ ಲೇಖಕರು ಸಿದ್ಧಾಂತದಲ್ಲಿ ಚಿಂತನೆಯನ್ನೂ, ಕ್ರಿಯಾಶೀಲತೆಯಲ್ಲಿ ಭಾವನಾತ್ಮಕತೆಯನ್ನೂ ಇಟ್ಟುಕೊಂಡಿದ್ದರು. ನಾಯಕತ್ವ ಮತ್ತು ದೃಷ್ಟಿ-ಸೃಷ್ಟಿಗಳ ವಿಚಾರದಲ್ಲಿನ ಸೂಕ್ಷ್ಮತೆಗಳಲ್ಲಿ ಸನ್ನಿವೇಶ ಕೆರಳಿತು.

"೧೯೪೫ರ ವೇಳೆಗಾಗಲೇ ನಿರಂಜನ, ಅನಕೃ ಅವರ ಪ್ರತಿನಿಧಿಸುತ್ತಿದ್ದ, ನಿಲುವುಗಳ ನಡುವೆ ಬಿರುಕು ಬಿಟ್ಟಿರುವುದನ್ನು ಗಮನಿಸುತ್ತೇವೆ. ಆಗ ಕಮ್ಯೂನಿಸ್ಟ್ ಪಕ್ಷದ ಸದಸ್ಯರಾಗಿದ್ದ ನಿರಂಜನರು ಸಹಜವಾಗಿಯೇ ಅಂಥ ನಿಲುವುಗಳನ್ನು ತಳೆದರು, ಸಾಹಿತ್ಯ ಕೃತಿಗಳಲ್ಲಿ ಅಶ್ಲೀಲತೆ ಮತ್ತು ಹಿಂದೂ ಪುನರುಜ್ಜೀವನದ ಹೆಸರಿನಲ್ಲಿ ಯಥಾಸ್ಥಿತಿಯ ಸಮರ್ಥನೆಗಳನ್ನು ಅವರು ಪ್ರಬಲವಾಗಿ ವಿರೋಧಿಸಿದರು."೮

ನಿರಂಜನ, ಕಟ್ಟೀಮನಿ ಮತ್ತು ಅವರ ಬೆಂಬಲಿಗರು ಒಂದು ಕಡೆಯಲ್ಲಿ ನಿಂತರೆ ಅನಕೃ, ತರಾಸು ಮತ್ತವರ ಬೆಂಬಲಿಗರು ಮತ್ತೊಂದು ಕಡೆಯಲ್ಲಿ ನಿಲ್ಲುವಂತಾಯಿತು. ನಿರಂಜನರಂಥ ಪ್ರಖರ ಸೂಕ್ಷ್ಮಜ್ಞ ಆ ಸಂದರ್ಭದಲ್ಲಿ

ಅತ್ಯಂತ ಸೈದ್ಧಾಂತಿಕ ನೆಲೆಯಲ್ಲಿ ತಮ್ಮ ಖಂಡನೆ ಮಂಡನೆಗಳನ್ನು ನಡೆಸಿ ಆರೋಗ್ಯಕರ ಸಂವಾದವನ್ನು ಇಷ್ಟಪಟ್ಟರು. ಅನಕೃ ಮಾತ್ರ ತಮ್ಮ ಪ್ರತಿಗಾಮೀ ಚಿಂತನೆಗಳನ್ನೇ ಗಟ್ಟಿಯಾಗಿ ಹಿಡಿದುಕೊಂಡು ಯದ್ವಾತದ್ವಾ ಪ್ರತಿಪಾದಿಸುತ್ತಾ, ಆರೋಗ್ಯಕರ ಸಂವಾದ ಮತ್ತು ಸೂಕ್ಷ್ಮ ವಿವೇಚನೆಯ ಆಚೆ ನಿಂತರು.

"ಪ್ರಗತಿಶೀಲ ಚಳುವಳಿಯನ್ನು ಮತ್ತೆ ಬದುಕಿಸುವಂಥ ಪ್ರಯತ್ನವೊಂದು ೧೯೫೨ರಲ್ಲಿ ಜೂನ್ ೪ ರಿಂದ ೭ ರವರೆಗೆ ಹಿರಿಯೂರಿನಲ್ಲಿ ನಡೆಯಿತು. ಇದು ಬಹುಮಟ್ಟಿಗೆ ತಮ್ಮ ಮೇಲಿನ ಅಶ್ಲೀಲತೆಯ ಆರೋಪಗಳಿಗೆ ಉತ್ತರ ಕೊಡಲು ಮತ್ತು ಕಮ್ಯೂನಿಸ್ಟ್ ವಿರೋಧದ ಬೊಬ್ಬೆ ಹಾಕಲು ಅನಕೃ ಅವರು ತಮ್ಮ ಬೆಂಬಲಿಗರ ನೆರವಿನೊಂದಿಗೆ ನಡೆಸಿದ ಸಮ್ಮೇಳನವೆಂಬುದಾಗಿ ನಿರಂಜನರು ಅಭಿಪ್ರಾಯ ಪಡುತ್ತಾರೆ. ನಿರಂಜನರ ಮಾತುಗಳ ಕಹಿ ಮತ್ತು ವ್ಯಂಗ್ಯಗಳನ್ನು ಬದಿಗಿರಿಸಿ ನೋಡಿದರೂ ಅವರ ಮಾತುಗಳಲ್ಲಿ ಸತ್ಯವಿದೆಯೆಂದು ತೋರುತ್ತದೆ. ಏಕೆಂದರೆ ಆ ಸಮ್ಮೇಳನದ ನಂತರವೂ ಅನಕೃ ಅವರು ಪ್ರಗತಿಶೀಲ ಚಳುವಳಿಯ ಅಭಿವೃದ್ಧಿಯಲ್ಲಿ ಯಾವುದೇ ಆಸಕ್ತಿಯನ್ನು ತೋರಿಸಲಿಲ್ಲ."೯

ಹಿರಿಯೂರಿನಲ್ಲಿ ನಡೆದ ಸಮ್ಮೇಳನದ ಅಧ್ಯಕ್ಷತೆ ವಹಿಸಿದವರು ದ.ಕೃ. ಭಾರದ್ವಾಜ. ಅವರು ಆ ಸಮ್ಮೇಳನವನ್ನು ಮೈಸೂರು ಸಂಸ್ಥಾನದ ಪ್ರಗತಿಶೀಲ ಲೇಖಕರ ಸಮ್ಮೇಳನವೆಂದೇ ಕರೆದರು. ಆದರೆ ಸಮ್ಮೇಳನದ ಸೂತ್ರ ಚಾಲಕರಾಗಿದ್ದ ಅನಕೃ ಅದನ್ನು ಕನ್ನಡ ನಾಡಿನ ಪ್ರಗತಿಶೀಲ ಸಾಹಿತಿಗಳ ಪ್ರಥಮ ಸಮ್ಮೇಳನವೆಂದು ಕರೆದರು. ಇದೂ ತೀರಾ ಅಪ್ರಾತಿನಿಧಿಕವಾಗಿತ್ತೆಂದೂ ಭಾರದ್ವಾಜರ ಭಾಷಣವಾಗಲೀ, ಉಳಿದವರಾಗಲೀ ಎಲ್ಲವೂ ಅತ್ಯಂತ ಹಾಸ್ಯಾಸ್ಪದವಾಗಿತ್ತೆಂದೂ ಮತ್ತು ಮೂಲಭೂತ ಧೋರಣೆಗಳಿಗೆ ವಿರೋಧಾಭಾಸ ಎನಿಸುವ ಹೇಳಿಕೆಗಳೇ ವಿಜೃಂಭಿಸಿದವೆಂಬ ಅರ್ಥದಲ್ಲಿ ನಿರಂಜನರು ಬರೆದಿದ್ದಾರೆ. ಮಾತ್ರವಲ್ಲ ತಾವು ಭಾಗವಹಿಸಿ ಎತ್ತಿದ್ದ ಆಕ್ಷೇಪಗಳಿಗೆ ಮಹತ್ವ ಸಿಗಲಿಲ್ಲ ಎಂದಿದ್ದಾರೆ."೧೦

೧೯೪೪ರಲ್ಲಿ ಪ್ರಕಟವಾದ 'ಪ್ರಗತಿಶೀಲ ಸಾಹಿತ್ಯ' ಎಂಬ ಕೃತಿಯು ಕನ್ನಡದ ಎಲ್ಲ ಪ್ರಗತಿಶೀಲ ಲೇಖಕರ ಒಮ್ಮುಖ ವೇದಿಕೆಯನ್ನು ಅರುಹುತ್ತದೆ. ೧೯೭೯ರಲ್ಲಿ ಪ್ರಕಟವಾದ 'ಪ್ರಗತಿಪಂಥ-ದಾಖಲೆಗಳು' ಕೃತಿಯು ಕನ್ನಡ ಪ್ರಗತಿಶೀಲ ಲೇಖಕರ ಒಡೆದುಹೋದ ಬಣಗಳನ್ನು ಅಧಿಕೃತವಾಗಿ ಸಾರುತ್ತದೆ. ಮಾತ್ರವಲ್ಲ ೧೯೫೦ರಲ್ಲಾಗಲೇ ಸ್ಥಗಿತಗೊಂಡ ವೇದಿಕೆಯನ್ನು ೧೯೭೫ರಲ್ಲಿ ಪುನರ್ ಚಾಲನೆ ನೀಡುವ ಸಂಘಟಿತ ಯತ್ನವನ್ನೂ ಹೇಳುತ್ತದೆ. ೧೯೬೪ರಲ್ಲಿ ನಿರಂಜನರು ಪ್ರಕಟಿಸಿದ 'ಬುದ್ಧಿ ಭಾವ ಬದುಕು' ಕೃತಿಯು ಕನ್ನಡದ ಪ್ರಗತಿಶೀಲ ಸಾಹಿತ್ಯಿಕ ಚಳವಳಿ ಸಿದ್ಧಾಂತ, ಜಗಳ, ಭಿನ್ನತೆ ಮತ್ತು ದುರಂತಗಳನ್ನು ಸ್ಪಷ್ಟವಾಗಿ ತಿಳಿಸಿಕೊಡುತ್ತದೆ. ವಾಸ್ತವವಾಗಿ ಈ ಪುಸ್ತಕದಲ್ಲಿ ೧೯೪೫ ರಿಂದ ೧೯೭೬ರವರೆಗೆ ನಿರಂಜನರು ಬೇರೆ ಬೇರೆ ಕಾಲದಲ್ಲಿ ಬರೆದ ಲೇಖನಗಳಿದ್ದು ಬಹುತೇಕ ಪ್ರಗತಿಶೀಲ ಸಾಹಿತ್ಯದ ಚರ್ಚೆಯೇ ಕೇಂದ್ರಬಿಂದುವಾಗಿದೆ.

ಈ ಸಂಬಂಧವಾಗಿ ಕೆಲವು ಉದ್ಧೃತಗಳನ್ನು ಗಮನಿಸಬಹುದು. "ಕನ್ನಡ ಸಾಹಿತ್ಯದಲ್ಲಿ ೧೯೪೩-೪೪ರ ಅವಧಿಯಲ್ಲಿ ಒಂದು ರೀತಿಯ ಕೋಲಾಹಲವನ್ನೇ ಉಂಟು ಮಾಡಿದ ಪ್ರಗತಿಶೀಲ ಲೇಖಕರ ಚಳವಳಿ ಕ್ರಮೇಣ ಕ್ಷೀಣವಾಗಿ ಹೋಯಿತು. ಆ ಚಳವಳಿಯ ಗುರಿ-ಧ್ಯೇಯಗಳ ಬಗ್ಗೆ ನಿರ್ದಿಷ್ಟ ಅಭಿಪ್ರಾಯಗಳೇ ಇರದಿದ್ದ ತಪ್ಪು ಕಲ್ಪನೆಯಿಂದ ಕೆಲವರ ಸ್ವಯಂ ಪ್ರತಿಷ್ಠೆಯ ಬಂಡೆಗಲ್ಲಿಗೆ ಬಡಿದು ಪ್ರಗತಿಶೀಲರ ಆಂದೋಲನ ಕುಂಠಿತವಾಯಿತು."[೧೧]

"...... ಯಾವುದೇ ಸಾಹಿತ್ಯ ಸಂಪ್ರದಾಯವಾಗಲೀ ಅದು ಓದುಗರಲ್ಲಿ ಮತ್ತು ವಿಮರ್ಶಕನಲ್ಲಿ ಅದರ ಸೈದ್ಧಾಂತಿಕ ಅಥವಾ ತಾತ್ವಿಕ ಪರಿಕಲ್ಪನೆಗೆ ಪ್ರತಿಕ್ರಿಯಿಸಬೇಕೆಂಬ ಒತ್ತಡವನ್ನು ತರುವುದರಲ್ಲಿ ವಿಫಲವಾದರೆ ಮಹತ್ವಪೂರ್ಣವಾದ ಸಾಹಿತ್ಯ ಸಂಪ್ರದಾಯವಾಗುವುದಿಲ್ಲ ಎಂಬುದಕ್ಕೆ ಪ್ರಗತಿಶೀಲ ಸಾಹಿತ್ಯ ಬಹುಶಃ ಉತ್ತಮ ಉದಾಹರಣೆಯಾಗಿದೆ."[೧೨]

ಪ್ರಗತಿಶೀಲ ಸಾಹಿತ್ಯದ ಗುರಿಧ್ಯೇಯಗಳನ್ನು ಸ್ಪಷ್ಟವಾಗಿ ತಿಳಿಯಲಾರದೇ ಹೋದವರು ತಮ್ಮ ಅಪಕ್ವ ವಿಚಾರಗಳೇ ಪ್ರಗತಿಶೀಲ ವಿಚಾರಗಳೆಂದರು. ನುಡಿ ಸರಿಯಾಗಿದ್ದಾಗ ನೆಡೆ ಅದಕ್ಕೆ ಸರಿಹೋಗಲಿಲ್ಲ ಎಂದು ಅಭಿಪ್ರಾಯಿಸಿದ ನಿರಂಜನರು ಮುಂದುವರೆದು.." "ಹೊಸತು ಎಂಬ ಕಾರಣಕ್ಕೆ ಮೂಗು ಮುರಿದವರು ಕೆಲವರು ಗುರಿಧ್ಯೇಯಗಳನ್ನು ಅರ್ಥಮಾಡಿಕೊಂಡು ಇವು ಅಪಾಯಕಾರಿ ಎಂದು ನಂಬಿ ಪೂರ್ವಬೋಧೆಯಿಂದ ಪ್ರತಿಭಟಿಸಿದವರು ಕೆಲವರು ತಪ್ಪು ತಿಳುವಳಿಕೆಯಿಂದ ಮೂದಲಿಕೆಯ ಮಾತುಗಳನ್ನಾಡಿದವರು ಬೇರೆ ಕೆಲವರು, ತಮ್ಮ ಮೇಲಾದ ಅರ್ಥಹೀನ ಟೀಕೆಯಿಂದ ಕೆರಳಿ ಲೇಖನಿ ಹಿಡಿದ ಉಳಿದ ಕೆಲವರು ಹೀಗೆ ಅಸಹನೆಯ ಅಣಕದ ಮಾತುಗಳಿಂದ ಆಗಿನ ಸಾಹಿತ್ಯ ಕ್ಷೇತ್ರ ಕಲುಷಿತವಾಯಿತು"[೧೩] ಎಂದು ಹೇಳುತ್ತಾರೆ.

ಒಟ್ಟಾರೆ 'ಪ್ರಗತಿ' ಎಂಬ ಶಬ್ದದ ಬಗ್ಗೆ ಹಾಗೂ ಪ್ರಗತಿಶೀಲ ಸಾಹಿತ್ಯದ ಬಗ್ಗೆ ಹಿಗ್ಗಾಮುಗ್ಗಾ ಎಳೆದಾಡಿದ ರೀತಿಯನ್ನು ಅಂದಿನ ಸಂದರ್ಭದಲ್ಲಿ ಬಂದ ಹತ್ತು ಹಲವು ಅನಿಸಿಕೆಗಳಲ್ಲಿ ಕಾಣಬಹುದು. ಅವೆಲ್ಲಾ ಒಟ್ಟಾಗಿ ಪ್ರಗತಿಶೀಲ ಸಾಹಿತ್ಯದ ಲಕ್ಷಣ, ವಾಖ್ಯೆಗಳನ್ನು ನೀಡಿ ಅವರು ಮಾಡಿಲ್ಲದ, ಮಾಡಬೇಕಾದ (ಅ) ಮಾಡಿದ ಪರಿಣಾಮಗಳ ವಿವರವನ್ನು ಕೊಟ್ಟವು.

"ಪ್ರಗತಿಶೀಲತೆ ಎಂಬುದು ಕೇವಲ ಇಂದಿನವರ ಪ್ರತಿಭೆಯಿಂದ ಹೊರಹೊಮ್ಮಿದ ವಿಚಾರವಲ್ಲ ಅಥವಾ ತರುಣರದೇ ಸೊತ್ತಲ್ಲ.. ಪ್ರಗತಿಶೀಲತೆಯು ಕೇವಲ ಸಾಹಿತ್ಯಕ್ಕೆ ಸೀಮಿತವಾಗಿಲ್ಲ... ಪ್ರಗತಿಪಂಥವು ಸಾಹಿತಿಗಳಿಗೆ ಮಾತ್ರ ಮೀಸಲಾದುದು ಎಂಬುದಕ್ಕೆ ನನ್ನ ಸಮ್ಮತಿಯಿಲ್ಲ... 'ಪ್ರಗತಿ' ಎಂದರೆ ಏನು ಎಂಬುದಕ್ಕೆ ಸಮರ್ಪಕವಾದ ವ್ಯಾಖ್ಯೆಯೇ ಇಲ್ಲದಂತಾಗಿದೆ. 'ಪ್ರಗತಿ' ಎಂದರೆ ಮುಂದೆ ಹೋಗುವುದು ಎಂದರ್ಥ. ಆದರೆ ಮುಂದೆ ಹೋಗುವುದು ಯಾವಾಗಲೂ ಒಳ್ಳೆಯದು ಎಂಬ ಭರವಸೆಯಿದೆಯೇ"[೧೪]

"ಪ್ರಗತಿಶೀಲ ಸಾಹಿತ್ಯ ವಾತಾವರಣ ನವೋದಯದ ಸಾಹಿತ್ತಿಕ ವಾತಾವರಣಕ್ಕೆ ಪ್ರತಿಕ್ರಿಯೆಯಾಗಿ ಮಾಡಿ ಬಂದದ್ದೇಂಬುದು ತಿಳಿದ ವಿಚಾರವೇ ಪ್ರಗತಿಶೀಲತೆಯೆಂಬ ಪರಿಕಲ್ಪನೆಯು ಮೂಲತಃ ಸಾಹಿತ್ಯಕ ಪರಿಭಾಷೆಯದಲ್ಲ ಎಂಬ ವಾದವು"[೧೫] ಸಾಹಿತ್ಯದ ಸಾಮಾಜಿಕ ತಳಹದಿಯನ್ನು ಮರೆತದ್ದಾಗಿರುತ್ತದೆ. ಪ್ರಗತಿ ಎಂಬುದು ಸಾಮಾಜಿಕ ಚಿಂತನೆಯ ನೆಲೆಗಳಲ್ಲೊಂದೆಂಬುದು ಒಪ್ಪುವ ಮಾತಾದರೂ ಸಮಾಜದ ಸೊಂಕಿಲ್ಲದ ಸಾಹಿತ್ಯದಲ್ಲಿ ಪ್ರಗತಿಯ ವಿವೇಚನೆಯನ್ನು ನೆಡೆಸುವುದು ಸಾಧ್ಯವೇ?

"ಪ್ರಗತಿಯೆನ್ನುವುದು ಈಗ ಇರುವ ಸ್ಥಿತಿಯಿಂದ ಇನ್ನು ಒಳ್ಳೆಯ ಸ್ಥಿತಿಯ ಕಡೆಗೆ ನಡೆಯುವ ಚಲನೆ"[೧೬] ಈ ಚಿಂತನೆಯನ್ನೇ ಪ್ರಗತಿಶೀಲ ಬರೆಹಗಾರರ ಆಲೋಚನೆಯೆಂದು ತೆಗೆದುಕೊಳ್ಳಬೇಕಾಗುತ್ತದೆ. ನಿರಂಜನರ ಕತೆಗಳಲ್ಲಿ ಇದಕ್ಕೆ ಬಹುಸ್ಪಷ್ಟವಾದ ನಿದರ್ಶನಗಳು ಸಿಗುತ್ತದೆ. ಪ್ರಸ್ತುತ ವ್ಯವಸ್ಥೆಯು ಅತ್ಯಂತ ಕೆಡುಕೆಂಬುದರ ಜೊತೆಗೆ ಸಮಾಜ ಮತ್ತು ಮನುಷ್ಯ ಇನ್ನೂ ಒಳ್ಳೆಯ ಸ್ಥಿತಿಯ ಕಡೆಗೆ ಚಲಿಸಬೇಕೆಂಬ ಆಶಯಗಳು ಅವರ ಕತೆಗಳಲ್ಲಿವೆ. ನಿರಂಜನರ ಆಶಾವಾದ ಮತ್ತು ಪ್ರಗತಿಶೀಲ ಪರಿಕಲ್ಪನೆಯ ಸ್ಥಾಯಿಭಾವಗಳಾದ ಉತ್ಸಾಹ ಉದ್ವೇಗಗಳು ಅವರ ಬಹುತೇಕ ಕತೆಗಳ ಧ್ವನಿಯಾಗಿರುವುದು ಮುಖ್ಯವಾದ ವಿಷಯ.

'ಪ್ರಗತಿಯೆನ್ನುವುದು ದಾರಿಯೇ ಹೊರತು ಗುರಿಯಲ್ಲ"[೧೭] ಪ್ರಗತಿಶೀಲ ಬರೆಹಗಾರರು ಮಾರ್ಕ್ಸ್‌ನ ಸಿದ್ಧಾಂತದಿಂದ ಪ್ರೇರಣೆ ಪಡೆದರೆಂಬುದು ಎಷ್ಟು ಸತ್ಯವೋ ಅಷ್ಟೆ ಸತ್ಯ. ಅವರಲ್ಲಿ ಅದು ಭಿನ್ನ ಭಿನ್ನ ರೀತಿಯಲ್ಲಿ ಅರ್ಥೈಸಿಕೊಂಡಿತೆಂಬುದು. ಸಿದ್ಧಾಂತವನ್ನು ಗ್ರಹಿಸುವ ಮನಸ್ಸು ತನ್ನ ವ್ಯಕ್ತಿನಿಷ್ಠ ಅನಿಸಿಕೆಗಳೊಂದಿಗೇ ಅದನ್ನು ಅಭಿವ್ಯಕ್ತಿಸುತ್ತದೆ.

ಹೀಗಿರುವುದರಿಂದಲೇ ಮಾರ್ಕ್ಸ್‌ವಾದ ಭಾರತದ ಹಲವು ಚಿಂತಕರ ಸಂದರ್ಭದಲ್ಲಿ ವಿವಿಧ ರೀತಿಗಳಲ್ಲಿ ಅರ್ಥೈಸಿಕೊಂಡಿದೆ. ಅಂಬೇಡ್ಕರ್ ವಾದ ಲೋಹಿಯಾ ವಾದ ಜೆ.ಪಿ. ವಾದ ಮೊದಲಾಗಿ.

ಸಾಹಿತ್ಯದಲ್ಲಿ ಪ್ರಗತಿ ಮತ್ತು ಪ್ರಗತಿಶೀಲ ಸಾಹಿತ್ಯ ಎರಡೂ ಭಿನ್ನ ಪರಿಕಲ್ಪನೆಗಳು ಪ್ರಗತಿಶೀಲ ಸಾಹಿತ್ಯದಲ್ಲಿ ಪ್ರಗತಿ ಎಂಬುದು ಎಷ್ಟಿತ್ತು? ಯಾವ ಪ್ರಮಾಣದಲ್ಲಿತ್ತು? ಅದರ ಸ್ವರೂಪ ವ್ಯಾಪ್ತಿಗಳು ಚರ್ಚಿತಗೊಳ್ಳುವಂತೆಯೇ ಒಟ್ಟಾರೆ ಕನ್ನಡ ಸಾಹಿತ್ಯದಲ್ಲಿನ ಪ್ರಗತಿಪರ ಅಂಶಗಳನ್ನು ವಿವೇಚನೆಗೆ ಒಳಗಾಗುತ್ತದೆ. ಅದಲ್ಲದೆ ಪ್ರಗತಿ ಎಂದರೇನು? ಎಂಬುದೇ ದೊಡ್ಡ ತೊಡಕಿನ ಪ್ರಶ್ನೆ. ಇದು ಕಾಲದೇಶ ಮನಸ್ಸುಗಳನ್ನು ಅವಲಂಬಿಸಿಯೇ ನಿರ್ಧಾರವಾಗಬೇಕಾದ್ದು. ಇದೇನು ಸಾರ್ವಕಾಲಿಕ ಮೌಲ್ಯವಲ್ಲ. ಒಟ್ಟಾರೆ ದೇಶ, ಕಾಲ, ಪರಿಸರಗಳಿಗೆ ಬದ್ಧವಾದ ಪರಿಕಲ್ಪನೆ ಒಂದು ಕಾಲದಲ್ಲಿ ವಿಜ್ಞಾನ ತಂತ್ರಜ್ಞಾನಗಳ ಅಭೂತಪೂರ್ವ ಮುನ್ನಡೆಯೇ ಪ್ರಗತಿ ಎನಿಸಿಕೊಂಡಿತ್ತು. ಈ ಹೊತ್ತು ಅದರ ಜೀವ ವಿರೋಧಿ ಮತ್ತು ಲೋಕ ವಿರೋಧಿ ದುರಂತಗಳ ಪ್ರತಿಕ್ರಿಯೆಯಿಂದಾಗಿ ಮನುಷ್ಯನ ಬದುಕು ಆತಂಕ ತಲ್ಲಣಗಳಿಂದ ಪ್ರತಿಕ್ಷಣ ತತ್ತರಗುಟ್ಟುತ್ತಿದೆ. ಹೀಗಾಗಿ ಪ್ರಗತಿ ಯಾವುದು? ವಿಗತಿ ಯಾವುದು

? ಇವೆಲ್ಲಾ ತುಂಬ ಸಂಕೀರ್ಣವಾದ ತೊಡಕಿನ ವಿಚಾರಗಳು ಮುಂದೆ ಹೋಗುವುದಲ್ಲ. ಪ್ರಗತಿ ಎಂಬ ಆಲೋಚನೆ ತುಂಬಾ ಹಾಸ್ಯಾಸ್ಪದ ಸಂಗತಿಯಾಗಿಬಿಡುತ್ತದೆ.

ವಾಸ್ತವವಾಗಿ ಕನ್ನಡ ಸಾಹಿತ್ಯದಲ್ಲಿ ಪ್ರಗತಿಶೀಲ ಚಳವಳಿ ಮಾಡಿದ ಸಿದ್ಧಾಂತ ಪ್ರಧಾನ ನಡೆಗಳು ಇವತ್ತಿಗೂ ಗಂಭೀರ ಯೋಗ್ಯವಾದವು. ಅವರ ಘೋಷಣೆ, ಪ್ರಚಾರ ಮತ್ತು ಉದ್ಬುದ್ಧನೆಯ ವಿವರಣೆಗಳು ಸೃಜನಶೀಲ ಕೃತಿಗಳಲ್ಲಿ ಸಾಹಿತ್ಯಿಕ ಮೌಲ್ಯಗಳ ಮೂಲಕ ಕಲಾವಂತಿಕೆಯ ಮೆರುಗು ಪಡೆಯಲಿಲ್ಲ ಎಂಬುದೇ ಆವತ್ತಿಗೂ ಇವತ್ತಿಗೂ ಪ್ರಜ್ಞಾವಂತರನ್ನು ಕಾಡುವ ಕೊರಗಾಗಿ ಉಳಿದುಬಿಟ್ಟಿದೆ.

"೧೯೫೨ರಲ್ಲಿ ರಿಂದ ೭೬ರ ವರೆಗಿನ ಅವಧಿಯಲ್ಲಿ ಪ್ರಗತಿಶೀಲ ಚಳುವಳಿಯ ಹೆಸರು ಕೂಡ ಇರಲಿಲ್ಲ ಲೇಖಕರಿದ್ದರು. ಕರ್ನಾಟಕದ ರಾಜಕೀಯ ಸಾಮಾಜಿಕ ಪರಿಸರದಲ್ಲಿ ಆದ ನಿಧಾನಗತಿಯ ಬದಲಾವಣೆಗಳು ಒಟ್ಟು ಸಾಂಸ್ಕೃತಿಕ ವಾತಾವರಣದಲ್ಲಿ ಅನೇಕ ಸ್ಥಿತ್ಯಂತರಗಳನ್ನು ತಂದಿದ್ದವು. ನವ್ಯ ಸಾಹಿತ್ಯದ ಉತ್ಕರ್ಷ ಅಪಕರ್ಷಗಳೆರಡನ್ನೂ ಸಾಹಿತ್ಯಾಭಿಮಾನಿಗಳು ಗಮನಿಸುತ್ತಿದ್ದರು... ಇಂಥ ಸನ್ನಿವೇಶದಲ್ಲಿ ತುರ್ತು ಪರಿಸ್ಥಿತಿಯ ನಡುವೆ ಪ್ರಗತಿಶೀಲತೆಗೆ ಸಾಂಸ್ಥಿಕ ಅಸ್ತಿತ್ವ ಕೊಡುವ ಮತ್ತೊಂದು ಅಲ್ಪಾಯು ಪ್ರಯತ್ನ ನಡೆಯಿತು."[೧೮]

೧೯೭೬ರ ಮೊದಲು ತಿಂಗಳಲ್ಲಿ ದಾವಣಗೆರೆಯಲ್ಲಿ ಜರುಗಿದ ಕರ್ನಾಟಕ ಪ್ರಗತಿಪಂಥ ಸಮ್ಮೇಳನವು ಕನ್ನಡದ ಪ್ರಗತಿಶೀಲ ಸಾಹಿತ್ಯ ಚಳುವಳಿಯನ್ನು ಪುನಶ್ಚೇತನಗೊಳಿಸುವ ಪ್ರಯತ್ನವಾಗಿತ್ತು. ಬೆಂಗಳೂರು, ಬಿಜಾಪುರ, ಧಾರವಾಡ, ಮಂಗಳೂರು ಮೊದಲಾದ ಪ್ರದೇಶಗಳಲ್ಲಿನ ಪ್ರಗತಿ ಆಸಕ್ತರ ನಡುವೆ ಒಂದು ವರ್ಷ ವಿಚಾರ ವಿನಿಮಯ ನಡೆದು ಪ್ರಗತಿಪರ ಲೇಖಕರ ಮತ್ತು ಕಲಾವಿದರ ವಿಶಾಲ ವೇದಿಕೆಯಾಗಿ ಪ್ರಗತಿಪಂಥವನ್ನು ರೂಪಿಸಬೇಕೆಂಬ ತೀರ್ಮಾನಕ್ಕೆ ಬರಲಾಯಿತು. (ಪ್ರಗತಿ ಪಂಥದ ಎರಡನೇಯ ಮತ್ತು ಮೂರನೇಯ ಸಮ್ಮೇಳನ ಕ್ರಮವಾಗಿ ೧೯೭೭-೭೮ರಲ್ಲಿ ನಡೆದುಹೋಯಿತು)

ದಾವಣಗೆರೆಯ ಸಮ್ಮೇಳನದ ಭಾಷಣ, ಪ್ರಬುದ್ಧ ಘೋಷಣೆ ಮತ್ತಿತರರ ದಾಖಲೆಗಳನ್ನು ಸಂಗ್ರಹಿಸಿ ಪುಸ್ತಕ ರೂಪದಲ್ಲಿ ಕರ್ನಾಟಕ ಪ್ರಗತಿಪಂಥ ಸಂಯೋಜನ ಸಮಿತಿ ಪ್ರಕಟಿಸಿತು. ಈ ಸಮ್ಮೇಳನವು ಪ್ರಗತಿಶೀಲ ಚಳುವಳಿಯ ಗತಿ ಇತಿಹಾಸವನ್ನು ಮತ್ತೆ ಕೆದಕಿ ಚರ್ಚೆ ಸಂವಾದಗಳನ್ನು ನಡೆಸಿಕೊಟ್ಟಿತು. ಮತ್ತೊಮ್ಮೆ ಪ್ರಗತಿಶೀಲ ಸಾಹಿತ್ಯದ ಗೊತ್ತುಗುರಿಗಳನ್ನು ಕುರಿತಂತೆ ಅಭಿಪ್ರಾಯ ವಿನಿಮಯವಾಯಿತು. ತಮ್ಮ ಸೋಲು ಒಡಕುಗಳನ್ನು ಒಪ್ಪಿಕೊಂಡು ಮುಂದಕ್ಕೆ ಮಾಡಬೇಕಾದ ಮಹತ್ತರ ಕೆಲಸಗಳನ್ನು ಜ್ಞಾಪಿಸಿಕೊಳ್ಳುತ್ತಾ ಚೌಕಟ್ಟೊಂದು ನಿರ್ಮಿಸಿಕೊಂಡಿತು. ಈ ಅರ್ಥದಲ್ಲಿ ಈ ಸಮಾವೇಶ ಯಶಸ್ವಿಯಾಯಿತೆಂದೇ ಹೇಳಬೇಕು.

ದುರಂತವೆಂದರೆ ಈ ಸಮಾವೇಶ ಕೂಡ ಇತಿಹಾಸಕ್ಕೆ ತಂದದ್ದು ವಿಪರ್ಯಾಸದ ವಿಷಯ. ಒಟ್ಟಾರೆ ಕನ್ನಡದ ಸಂದರ್ಭದಲ್ಲಿ ಹಾದುಹೋದ ಪ್ರಗತಿಶೀಲ ಪ್ರಗತಿಪಂಥ ವೇದಿಕೆಗಳು ಇವತ್ತಿಗೂ ಒಂದು ರೋಚಕ ಸಂಗತಿಯಾಗಿ ಕಾಣುತ್ತದೆ. ಆ ಮೂಲಕ ಬರಹಗಾರರ ನಡೆನುಡಿಗಳ ಆಂಶಿಕ ಸ್ವರವೊಂದು ಮನದಟ್ಟಾಗುತ್ತದೆ.

"ಪ್ರಗತಿಶೀಲ ಸಾಹಿತ್ಯದತ ಮಿತಿಗಳನ್ನೂ ಘೋಷಣೆಗಳ-ಅನುಷ್ಠಾನಗಳ ನಡುವಣ ದೊಡ್ಡ ಕಂದಕವನ್ನು ಆ ಪಂಥದ ಸಾಹಿತಿಗಳೇ ಗುರುತಿಸಿದ್ದು ಮುಂದೆ 'ಪ್ರಗತಿಪಂಥ'ದ ಹೊಸ ಸಂಘಟನೆಯಲ್ಲಿ ಹಿಂದಿನ ತತ್ವಗಳನ್ನು ಸರಿಪಡಿಸಿಕೊಂಡು ನೆಡೆಯನ್ನು ಇನ್ನೂ ಖಚಿತಗೊಳಿಸಿಕೊಳ್ಳುವ ಪ್ರಯತ್ನ ಮಾಡಿದ್ದೂ ಮುಖ್ಯವಾಗಿ ಕಾಣುತ್ತದೆ. ಯಾವುದೇ ಹೊಸ ಚಳವಳಿ ಹುಟ್ಟಿಕೊಂಡಾಗ ಆ ಚಳವಳಿಯಲ್ಲಿ ಬಿರುಕು ಕಾಣಿಸಿಕೊಂಡಾಗ ಅವುಗಳನ್ನು ವ್ಯಕ್ತಿದ್ವೇಷದಿಂದಲೇ ವೈಯಕ್ತಿಕ ಕಲಹವೆಂದೋ ಹೇಳುವುದು ತುಂಬಾ ಸುಲಭ. ಹಾಗೆ ಮಾಡದೆ ಪ್ರಗತಿಶೀಲ ಮತ್ತು ಪ್ರಗತಿ ಪಂಥದ ಪ್ರಣಾಳಿಕೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಮೂಲ ಆಶಯಗಳು ಒಂದೇ ಆಗಿದ್ದರೂ ಎರಡನೇ ಪ್ರಣಾಳಿಕೆಯಲ್ಲಿ ಹೆಚ್ಚಿನ ಎಚ್ಚರ ಪರಿಷ್ಕರಣ ಕಾಣುತ್ತದೆ. ಎಪ್ಪತ್ತರ ದಶಕದ ಕೊನೆಯಲ್ಲಿ ಹುಟ್ಟಿಕೊಂಡ ಬಂಡಾಯ ಸಾಹಿತ್ಯದ ಪ್ರಣಾಳಿಕೆಯಲ್ಲೂ ಪ್ರಗತಿಶೀಲ ಸಾಹಿತ್ಯದ ಮೂಲಧ್ವನಿಗಳನ್ನು ಕೇಳುತ್ತೇವೆ. 'ಬಂಡಾಯ ಸಾಹಿತ್ಯ' ಒಂದು ರೀತಿಯಲ್ಲಿ 'ನವ್ಯ ಸಾಹಿತ್ಯಕ್ಕೆ' ಪ್ರತಿಕ್ರಿಯೆಯಾಗಿ ಹುಟ್ಟಿಕೊಂಡಿದ್ದರೂ ಅದರಲ್ಲಿ ಪ್ರಗತಿಶೀಲ ಸಾಹಿತ್ಯದ ಮುಂದುವರಿಕೆಯನ್ನು ಕಾಣಬಹುದಾಗಿದೆ"[೧೯]

ವಿವರಣೆಯ ಅಗತ್ಯವಿಲ್ಲದೇ ತನಗೆ ತಾನೇ ಈ ಅವಲೋಕನ ಸ್ಪಷ್ಟವಾಗಿದೆ. "ಸಾಹಿತ್ಯವು ಜೀವನದೊಂದಿಗೆ ಇಟ್ಟುಕೊಂಡಿರಬೇಕಾದ ಸಂಬಂಧದ ಸ್ವರೂಪವನ್ನು ಕುರಿತು ಪ್ರಶ್ನೆ ಚರ್ಚೆಗಳನ್ನು ಇನ್ನೂ ಜೀವಂತವಾಗಿಟ್ಟಿರುವುದೇ ಪ್ರಗತಿಶೀಲ ಸಾಹಿತ್ಯದ ಪ್ರಮುಖ ಸಾಧನೆ."[೨೦]

ಪ್ರಗತಿಶೀಲ ಸಾಹಿತ್ಯದಲ್ಲಿ ವರ್ಗಪರಿಕಲ್ಪನೆ ಅಧ್ಯಯನಕ್ಕೆ ಪ್ರಗತಿಶೀಲ ಸಾಹಿತ್ಯ ಚಳುವಳಿಯ ಚೌಕಟ್ಟನ್ನು ಹಾಕಿಕೊಂಡು ಕೆಲವೇ ಕವಿಗಳ ಕತೆ, ಕಾದಂಬರಿಗಳನ್ನು ಅಧ್ಯಯನಕ್ಕೆ ಒಳಪಡಿಸಿರುವುದು ಒಂದು ರೀತಿಯಲ್ಲಿ ದಿಗ್ಬಂಧನ ಮಾಡಿದಂತೆಯೇ ಆದರೆ ಈ ಕೆಲವು ಕತೆ, ಕಾದಂಬರಿಗಳು, ಪ್ರಗತಿಶೀಲ ಆಂದೋಲನದ ದಿನಗಳನ್ನು ಹಾದುಬಂದಿರುವುದು ಖಚಿತವಿರುವಾಗ ಈ ಹಿನ್ನೆಲೆಯನ್ನು ಮರೆತು ವರ್ಗಪರಿಕಲ್ಪನೆಯನ್ನು ಚರ್ಚಿಸುವುದು ಸರಿಕಾಣದ ಪ್ರಯುಕ್ತ ಈ ಒಂದು ಅಧ್ಯಾಯದಲ್ಲಿ ಪ್ರಗತಿಶೀಲ ಸಾಹಿತ್ಯದ ಒಲವು ನಿಲುವುಗಳನ್ನು ಸ್ಥೂಲವಾಗಿ ನೋಡಲಾಗಿದೆ.

೧. ಕೀರ್ತಿನಾಥ ಕುರ್ತಕೋಟಿ : ಯುಗಧರ್ಮ ಮತ್ತು ಸಾಹಿತ್ಯ ದರ್ಶನ: ಮನೋಹರ ಗಂಥಮಾಲೆ, ಧಾರವಾಡ ೧೯೯೧ ಪುಟ ೨೨೧

೨. ಅನಕೃಷ್ಣರಾಯ : ಪ್ರಗತಿಶೀಲ ಸಾಹಿತ್ಯ: ಪ್ರಗತಿಶೀಲ ಲೇಖಕರ ಸಂಘ, ಬೆಂಗಳೂರು, ೧೯೪೪ ಪುಟ ೨೭

೩. ದೇ.ಜ. ಗೌ ಮತ್ತು ಸಿ.ಪಿ.ಕೆ. : ಸಂ. ಕಟ್ಟೀಮನಿ ಬದುಕು ಬರಹ, ಗೀತಾ ಬುಕ್ ಹೌಸ್ ಮೈಸೂರು,೧೯೬೯. ಪುಟ

೪. ನಿರಂಜನ : ಬುದ್ಧಿ ಭಾವ ಬದುಕು : ಸ್ಪಂದನ ಪ್ರಕಾಶನ, ಬೆಂಗಳೂರು ೧೯೮೪, ಪುಟ ೫೪

೫. ಕೀರ್ತಿನಾಥ ಕುರ್ತಕೋಟಿ: ನಡೆದು ಬಂದ ದಾರಿ ಪುಟ೮ ೧೯

೬. ಅರ್ಕೆ : ಕನ್ನಡ ಪ್ರಗತಿಶೀಲ ಸಾಹಿತ್ಯ ಸ್ಥೂಲಚಿತ್ರ, ಸಾಹಿತ್ಯ, ಆಶಯ, ವಿನ್ಯಾಸ : ಸಂಕ್ರಮಣ ಪ್ರಕಾಶನ, ಧಾರವಾಡ ೧೯೮೮ ಪುಟ

೭. ಶ್ರೀನಿವಾವಾಸರಾಜು ಜಿ: ಪ್ರಗತಿಶೀಲ ಸಾಹಿತ್ಯ ಚಳುವಳಿ ಕನ್ನಡ ಸಾಹಿತ್ಯ ಸಂದರ್ಭ: ಕರ್ನಾಟಕ ಸಾಹಿತ್ಯ ಅಕಾಡೆಮಿ ೧೯೯೦, ಪುಟ

೮. ಹೆಚ್.ಎಸ್. ರಾಘುವೇಂದ್ರ ರಾವ್: ಪ್ರಗತಿ ಶೀಲತೆ, ಕರ್ನಾಟಕ ಸಾಹಿತ್ಯ: ಅಕಾಡಮಿ, ಪುಟ

೯. ಹೆಚ್.ಎಸ್. ರಾಘುವೇಂದ್ರ ರಾವ್: ಪ್ರಗತಿ ಶೀಲತೆ, ಕರ್ನಾಟಕ ಸಾಹಿತ್ಯ: ಅಕಾಡಮಿ, ಪುಟ ೫೪

೧೦. ಕೀರ್ತಿನಾಥ ಕುರ್ತಕೋಟಿ ನಡೆದು ಬಂದ ದಾರಿ ಪುಟ ೮೧೯

೧೧. ನಿರಂಜನ ಬುದ್ಧಿಭಾವ ಬದುಕು, ಸ್ಪಂದನ ಪ್ರಕಾಶನ ಬಂಗಳೂರು ೧೯೮೪, ಪುಟ

೧೨. ಜಿ. ಎಚ್. ನಾಯಕ, ಪ್ರಾಚೀನ ಮತ್ತು ಆಧುನಿಕ ಕನ್ನಡ ಸಾಹಿತ್ಯ ಒಂದು ನೋಟ, ನಿರಪೇಕ್ಷ, ಅಕ್ಷರ ಪ್ರಕಾಶನ ಸಾಗರ ೧೯೮೪ ಪುಟ ೩೦

೧೧. ನಿರಂಜನ ಬುದ್ಧಿಭಾವ ಬದುಕು, ಸ್ಪಂದನ ಪ್ರಕಾಶನ ಬಂಗಳೂರು, ೧೯೮೪ ಪುಟ ೫೦ ೫೧

೧೪. ಶ್ರೀರಂಗ, ಪ್ರಗತಿ ಮೀಮಾಂಸೆ ವಿಚಾರ ಸಾಹಿತ್ಯ ಸಂ ಒಂದು, ಬೆಂಗಳೂರು ವಿಶ್ವವಿದ್ಯಾನಿಲಯ ೧೯೭೭ ಪುಟ

೧೫. ಎಚ್. ಎಸ್ ರಾಘುವೇಂದ್ರ ರಾವ್, ಪ್ರಗತಿಶೀಲತೆ ಕರ್ನಾಟಕ ಸಾಹಿತ್ಯ ಅಕಾಡೆಮಿ ೧೯೯೦,.ಪುಟ ೧

೧೬. ಎಚ್. ಎಸ್ ರಾಘುವೇಂದ್ರ ರಾವ್, ಪ್ರಗತಿಶೀಲತೆ ಕರ್ನಾಟಕ ಸಾಹಿತ್ಯ ಅಕಾಡೆಮಿ ೧೯೯೦,.ಪುಟ ೧

೧೭. ಎಚ್. ಎಸ್ ರಾಘವೇಂದ್ರ ರಾವ್, ಪ್ರಗತಿಶೀಲತೆ ಕರ್ನಾಟಕ ಸಾಹಿತ್ಯ ಅಕಾಡೆಮಿ ೧೯೯೦,.ಪುಟ ೪

೧೮. ಎಚ್. ಎಸ್ ರಾಘವೇಂದ್ರ ರಾವ್, ಪ್ರಗತಿಶೀಲತೆ ಕರ್ನಾಟಕ ಸಾಹಿತ್ಯ ಅಕಾಡೆಮಿ ೧೯೯೦,.ಪುಟ ೫೫

೧೯. ಟಿ. ಪಿ. ಅಶೋಕ, ಪ್ರಗತಿಶೀಲ ಸಾಧನೆ ಮತ್ತು ಕೊಡುಗೆ, ಸಂಕ್ರಮಣ ಪತ್ರಿಕೆ ಸಂಪುಟ ೨೩ ಸಂಚಿಕೆ ೩ ಮಾರ್ಚ್ ೧೯೮೮ ಪುಟ ೩೩

೨೦. ಟಿ. ಪಿ. ಅಶೋಕ, ಪ್ರಗತಿಶೀಲ ಸಾಧನೆ ಮತ್ತು ಕೊಡುಗೆ, ಸಂಕ್ರಮಣ ಪತ್ರಿಕೆ ಸಂಪುಟ ೨೩ ಸಂಚಿಕೆ ೩ ಮಾರ್ಚ್ ೧೯೮೮ ಪುಟ ೩೧

* * * * * *

ಅಧ್ಯಾಯ - ೪

# ಕನ್ನಡ ಪ್ರಗತಿಶೀಲ ಕಥಾ ಸಾಹಿತ್ಯದಲ್ಲಿ ವರ್ಗ ಪರಿಕಲ್ಪನೆ

ಕನ್ನಡ ಕಥಾ ಸಾಹಿತ್ಯ ಅಥವಾ ಕಥಾ ಪರಂಪರೆ ತುಂಬಾ ಸುದೀರ್ಘ ಇತಿಹಾಸವನ್ನು ಹೊಂದಿದೆ. ಕಥೆ ಹೇಳುವುದು ಮತ್ತು ಕೇಳುವುದು ಮನುಷ್ಯನ ಬದುಕಿನ ಅವಿಭಾಜ್ಯ ಅಂಗಗಳಲ್ಲೊಂದು ಜನಪದ ಬದುಕಿನಲ್ಲಿ ಹಾಸು ಹೊಕ್ಕಾದ ಕತೆ ಅಕ್ಷರ ಸಂಸ್ಕೃತಿಯೊಳಗೆ ಪ್ರವೇಶ ಮಾಡಿದಾಗ ಹಲವು ರೀತಿಯ ಸ್ವತಂತ್ರಗಳು ಪಡೆಯಿತು.

ಹೊಸಗನ್ನಡ ಕಾಲ ಘಟದಲ್ಲಿ ಕತೆ ಪಡೆದುಕೊಂಡ ತಿರುವುಗಳು ವ್ಯಾಪಕವಾಗಿವೆ. ಸುತ್ತಲಿನ ಪರಿಸರದಲ್ಲಿ ಉಸಿರಾಡುತ್ತಿದ್ದ ಕತೆಯೊಂದು ಸಾಹಿತ್ಯ ಕಲೆಯ ಸಂಸರ್ಗಕ್ಕೆ ತೊಡಗಿಕೊಂಡಾಗ, ಅನೇಕ ತಾಂತ್ರಿಕ ಪರಿಣಿತಿಗಳನ್ನು ಹೊಂದಿ ಸ್ವರೂಪವನ್ನೇ ಬದಲಿಸಿಕೊಳ್ಳಬೇಕಾಯಿತು. ನವೋದಯ ಪೂರ್ವ ಮತ್ತು ನವೋದಯ ಕಾಲಘಟ್ಟಗಳ ಕತೆಯ ಲಕ್ಷಣ ಮತ್ತದರ ಪರಿಕಲ್ಪನೆಯ ಬಹುತೇಕ ಹೇಳುವ ಸಂಪ್ರದಾವಾಗಿದ್ದವು ಜೀವನ ಚಿತ್ರಣ ದರ್ಶನ, ಶೋಧನೆಗಳು ಈ ಸಂದರ್ಭದಲ್ಲಿ ಅಪಾರ ಪ್ರಮಾಣದಲ್ಲಿ ಹೊರ ಬಂದವು ಪ್ರಗತಿಶೀಲ ಸಂದರ್ಭದ ಕತೆಯ ಪರಿಕಲ್ಪನೆ ತಾತ್ವಿಕ ಗ್ರಹಿಕೆಗಳನ್ನು ನಿಸ್ಸಂದೇಹವಾಗಿ ಬದಲಾಯಿಸಿದವು. ಇಲ್ಲಿ ಕತೆಯನ್ನು 'ರಚಿಸುವ ಪ್ರಜ್ಞಾ' ಪೂರ್ವಕ ನೆಲೆಯೇ ಹೆಚ್ಚಾಯಿತು. ಕತೆಗಾರರ ನಿಲುವು ಮತ್ತು ಸಂವೇದನೆಗಳಲ್ಲಿ ಉಂಟಾದ ಬದಲಾವಣೆಯು ಕನ್ನಡ ಕಥಾ ಪರಂಪರೆಯ ದಿಕ್ಕನ್ನೆ ಬದಲಾಯಿಸುವಷ್ಟು ಗಮನಾರ್ಹವಾಯಿತು ಸಾಮಾಜಿಕ ನ್ಯಾಯ ಪ್ರತಿಪಾದನೆಯತ್ತ ಇಲ್ಲಿನ ಬಹುತೇಕ ಲೇಖಕರು ಗಮನಕೊಟ್ಟರು. ನೊಂದ, ಶೋಷಿತರ ಪರ ವಕಾಲತ್ತು ವಹಿಸಿದರು.

ಬಹಳ ಮುಖ್ಯ ಸಂಗತಿ ಎಂದರೆ ಪ್ರಗತಿಶೀಲ ಲೇಖಕರಲ್ಲಿ ಮುಖ್ಯರೆನಿಸಿಕೊಂಡ, ಚಳುವಳಿಯೊಂದಿಗೆ ಐಚ್ಛಿಕವಾಗಿ ಗುರುತಿಸಿಕೊಂಡ ಕಟ್ಟಿಮನಿ, ನಿರಂಜನ ಚದುರಂಗ, ಅನಕೃ, ತರಾಸು ಮೊದಲಾದವರು 'ಕತೆ' ಯನ್ನು ಗ್ರಹಿಸಿದ್ದ ರೀತಿಯೇ ವಿಭಿನ್ನವಾಗಿತ್ತು. ಈ ಲೇಖಕರು ಈ ಪ್ರಗತಿಶೀಲ ಚಳುವಳಿಯಲ್ಲಿ ಹಾದು ಬರುವುದರಿಂದ ಇವರ ಕೆಲವು ಕತೆಗಳನ್ನು ಇಲ್ಲಿ ವರ್ಗ ಪರಿಕಲ್ಪನೆಯ ನೆಲೆಯಲ್ಲಿ ಚರ್ಚೆಗೆ ತೆಗೆದುಕೊಳ್ಳಲಾಗಿದೆ.

ಪ್ರಗತಿಶೀಲ ಸಾಹಿತ್ಯ ಚಳುವಳಿಯಲ್ಲಿ ನೇರವಾಗಿ ಭಾಗವಹಿಸಿ ಅದರ ಗೊತ್ತುಗುರಿಗಳನ್ನು ಇತಿಮಿತಿಗಳನ್ನು ಕಂಡು ಅನುಭವಿಸಿ ಮಾರ್ಗದರ್ಶನ ಮಾಡಿದ ನೇತಾರರಲ್ಲಿ ಕಟ್ಟಿಮನಿಯವರು ಒಬ್ಬರು ಇವರು ತಮ್ಮ ಕತೆಗಳಲ್ಲಿ ಪ್ರಗತಿಶೀತಲತೆಯ ಬಹಳ ಮುಖ್ಯ ಆಶಯ ವರ್ಗನೆಲೆಗಳನ್ನು ಹೇಗೆ ಕಂಡಿದ್ದಾರೆಂಬುದನ್ನು ಈಗ ಅವರ ಕೆಲವು ಕತೆಗಳಲ್ಲಿ ನೋಡಬಹುದು.

ಹಾಗೆ ನೋಡಿದಾಗ ಕೇವಲ ಒಂಬತ್ತು ಕತೆಗಳು ಮಾತ್ರ ಈ ಪರಿಧಿಗೆ ಬರುತ್ತದೆ ಅದರೆ ಕಟ್ಟಿಮನಿ ಹಸಿವು ಬಡತನಗಳನ್ನು ಸ್ಥಾಯಿಯಾಗಿಟ್ಟುಕೊಂಡು ಸಾರಾಸಗಟಾಗಿ ಬರೆದವರೆಲ್ಲ ಎಂಬುದು ಇದರಿಂದ ತಿಳಿದುಬರುತ್ತದೆ. ಈ ಒಂಬತ್ತು ಕತೆಗಳು ಅಧ್ಯಯನದಿಂದಷ್ಟರಲ್ಲೇ ಅವರು ಈ ಅಂಶಗಳನ್ನು

ತಿಳಿಯಬಹುದಾಗಿದೆ. ಸಂಪಾದಕನ ಕುರ್ಚಿ ಕತೆಯು ಸೆರೆಯಿಂದ ಹೊರಗೆ ಎಂಬಾ ಕಥಾ ಸಂಕಲನದಲ್ಲಿದೆ. ಇನ್ನೊಂದು ವಿಚಿತ್ರ ಎನಿಸುವ ವಿಶೇಷತೆ ಬಂಡವಾಳಗಾರ ಕಾರ್ಮಿಕನನ್ನು ಶೋಷಿಸುವ ವಿವರಣೆಯನ್ನು ಒಳಗೊಂಡಿದೆ. ಈ ವಿವರಣೆ ಸಂಭಾಷಣೆ ಮೂಲಖ ಮತ್ತು ಈ ಸಂಭಾಷಣೆ ಮೃತ ಪ್ರಜ್ಞೆಯೊಂದು ತನ್ನ ಜಾಗವನ್ನು ಪುನಃ ಪಡೆಯುವ ಒತ್ತಾಯದ ವಿಷಯದೊಂದಿಗೆ ಚರ್ಚಿಸಿಕೊಳ್ಳುತ್ತಾ ಹೋಗುತ್ತದೆ. 3 ಅಪರಿಚಿತ ವ್ಯಕ್ತಿಗಳು ಪತ್ರಿಕೆಯೊಂದನ್ನು ಪ್ರಾರಂಭಸುತ್ತಾರೆ ಅದು ಕ್ರಮೇಣ ಚೆನ್ನಾದ ಹೆಸರು ಮತ್ತು ಪ್ರಸಾರ ಪಡೆದಾಗ ಬಂಡವಾಳ ತೊಡಗಿಸಿದ ಉಳಿದಿಬ್ಬರು ಕೆಲಸಗಾರನ್ನಾಗಿ ಕಾಣುವ ನಿರ್ದಯ ಅಮಾನವೀಯ ಬಂಡವಾಳಗಾರನಾಗಿ ಬದಲಾಗುವ ಪರಿಸ್ಥಿತಿ ನಿರ್ಮಾಣಗೊಳ್ಳುತ್ತದೆ. ಜೊತೆಗೆ ಕಿಟ್ಟಣ್ಣ ಬೇಸತ್ತು ಕೆಲಸ ಬಿಟ್ಟು ಹೋದರೆ ಮಾದುರಾಯ ಪತ್ರಿಕೆಯ ಮೋಹದಿಂದಲೂ ಬೇರೊಂದು ಕೆಲಸ ಸಿಗುವ ಸಾಧ್ಯತೆಗಳು ಕಡಿಮೆ ಎಂಬ ಆಲೋಚನೆಯಿಂದಲೂ ಅಲ್ಲಿಯೇ ಕಾರ್ಯ ನಿರ್ವಹಿಸುತ್ತಿರುತ್ತಾನೆ. ವಾಸ್ತವವಾಗಿ ಪತ್ರಿಕೆ ಇಂದು ಏನಾಗಿದೆಯೋ ಯಾವ ಒಳ್ಳೆಯ ಹೆಸರಿನಿಂದ ಕೀರ್ತಿಸಲ್ಪಡುತ್ತಿದೆಯೋ ಅದರ ಹಿದೆ ಇವರ ಅಪಾರ ಶ್ರಮವಿದೆಯೆಂಬುದು ಕತೆಯ ನಿರೂಪಣೆಯ ಸಂದರ್ಭದಲ್ಲಿ ತಿಳಿಯುತ್ತದೆ. ಈಕತೆಯಲ್ಲಿ ವ್ಯಂಗ್ಯವಿರುವುದು ಉಪಸಂಪಾದಕನ ಕುರ್ಚಿಯನ್ನು ಮತ್ತೆ ಪಡೆಯಲು ನಡೆಸುವ ಹೋರಾಟದಲ್ಲಿ ಈ ಹೋರಾಟದ ಮಾತುಕತೆಗಳು ಈಗಾಗಲೆ ಹೊಸದಾಗಿ ಆ ಸ್ಥಳಕ್ಕೆ ಬಂದು ಕಾರ್ಯ ನಿರ್ವಹಿಸುತ್ತಿರುವ ವ್ಯಕ್ತಿಗೆ ಕೇಳಿಸದೆ ಅರಣ್ಯರೋಧನವಾಗುವ ವಿನೋದದಲ್ಲಿ ಸತ್ತವನ ಒದರಾಟ ಓದುಗಾರನಿಗೆ ಕತೆಯ ಮೂಲಕ ಕೇಳಿಸಬಹುದೋ ಹೊರತು ಹೊಸದಾಗಿ ಅವನ ಜಾಗಕ್ಕೆ ಬಂದ ವ್ಯಕ್ತಿಗೆ ಕೇಳಿಸಿತು ತಾನೆ ಹೇಗೆ? ಉಪಸಂಪಾದಕನೊಬ್ಬ ಬೆವರಿನಿಂದ ಬೆಳೆದು ದುಡ್ಡಿನಿಂದ ಸೊಕ್ಕಿದ ಪತ್ರಿಕಾ ಮಾಲೀಕ ತನಗೆ ಸುಖಸಂಪತ್ತುಗಳನ್ನು ಒದಗಿಸಿದ್ದ ಆತನನ್ನು ತನ್ನ ಸ್ವಾರ್ಥಕ್ಕೆ ಬಲಿಯಾಗಿಸಿದ ಅನ್ಯಾಯದ ಕತೆಯಲ್ಲಿ ಕಾಣಬಹುದು ಲೇಖಕನ ಒತ್ತು ಈ ಅಂಶದಕಡೆಗೆ ಮಾತ್ರ. ಮಾಧುರಾಯ ತನ್ನ ಕೆಲಸದ ಸ್ಥಿತಿಗತಿ ತನಗಾದ ಅನ್ಯಾಯದ ಹಸಿವೆ ಬಡತನದ ರೋಗಗಳನ್ನು ಕುರಿತು ಅಶಕ್ತತೆಯಿಂದ ಹೇಳಿಕೊಳ್ಳುತ್ತಾನೆ. ಪ್ರಜ್ಞೆ ಪ್ರವಾಹ ತಂತ್ರದ ಮೂಲಕ ಅವನ ಮಾತುಗಳಲ್ಲಿನ ಕಠೋರ ವಾಸ್ತವತೆಯನ್ನು ನಿಧಾನವಾಗಿ ಕುತೂಹಲ ಸಮೇತ ಬಿಚ್ಚಿಡುವುದರಲ್ಲಿ ಲೇಖಕ ತಲ್ಲೀನನಾಗುತ್ತಾನೆ.

ಕಾರ್ಮಿಕ ಬಂಡವಾಳಗಾರ ಪ್ರಜ್ಞೆಶೋಷಿತ ಶೋಷಕ ನೆಲೆಗಳ ವೈದೃಶ್ಯದಲ್ಲಿ ಹೇಳಬೇಕಾದ ಆಶಯಕ್ಕೆ ಕಟ್ಟೀಮನಿ ಸೂಕ್ತವಾದ ಬಿನ್ನತರನಾದ ನಿಲುವನ್ನು ಕಂಡು ಕೊಂಡಿರುವದು ಗಮನಾರ್ಹ ಪತ್ರಿಕೆ ನಡೆಸುವ ಜವಾಬ್ದಾರಿ ಅದರ ಸಂಕಷ್ಟಗಳು ಮತ್ತು ಅದಕ್ಕೆ ಬೇಕಾದ ಪರಿಣಿತಿಯನ್ನು ಕುರಿತಂತೆ ವಿಶೇಶವಾಗಿ ತಿಳಿಸುತ್ತದೆ. ನಾಲ್ಕು ಗೋಡೆಗಳ ನಡುವೆ ಕುಳಿತು ಡಿಗ್ರಿಗಳನ್ನು ಪಡೆಯುತ್ತಾ ಹೋಗುತ್ತಾನೆ. ಮನಸ್ಸುಗಳಿಗೂ ಬದುಕಿನ ವಿಶಾಲ ಹೋಟದಲ್ಲಿ ಅನುಭವಗಳೊಂದಿಗೆ ಗುದ್ದಾಡುತ್ತಾ ಹೊರಳಾಡುತ್ತ ಸತ್ಯಗಳನ್ನು ಅರಿಯುವ ಮನಸ್ಸುಗಳಿಗೂ ವ್ಯತ್ಯಾಸ ಕಲ್ಪಿಸುವುದು ಕತೆಯ ಉದ್ದೇಶ ಬಂಡವಾಳಗಾರ ಕಾರ್ಮಿಕನ ಯೋಗಕ್ಷೇಮದತ್ತ ದೃಷ್ಟಿ ಹರಿಸದೇ ಸಾಧ್ಯವಾದಷ್ಟು ಆತನಿಂದ ದುಡಿಸಿಕೊಂಡ ಲಾಭಾಂಶದ ಕಡೆಗೆ ಮನಸ್ಸು ನೆಟ್ಟ ವಿಶ್ವಾಸಘಾತುಕತನವನ್ನು ಅನಾವರಣ

ಮಾಡುವುದು ಕತೆಯ ಉದ್ದೇಶವಾಗಿದೆ. ಉಪಸಂಪಾದಕನಾದ ಅಳಿವಿನತ್ತ ಲೇಖಕನ ಸಾನುಕಂಪ ಒಲಿದಿರುವುದು ನಿರೂಪಿಸುವ ವಿಧಾನದಿಂದಲೇ ಗೊತ್ತಾಗುತ್ತದೆ.

ಕುರುಡ ಹೇಳಿದ ಕತೆ ಗರಡಿಯಾಳು ಸಂಕಲನದಲ್ಲಿದೆ ಚೆನ್ನಾದ ಬದುಕನ್ನು ನಡೆಸುತ್ತಿದ್ದ ರೈತ ದಂಪತಿಗಳು ಊರದೇಸಾಯಿಯ ಕ್ರೂರ ದೃಷ್ಟಿಗೆ ಕೆಟ್ಟ ಚಪಲಕ್ಕೆ ಸಿಲುಕಿ ದುರಂತ ಏನೆನ್ನುವ ಸಂಗತಿಯಿದೆ. ತನ್ನ ಹೆಂಡತಿಯನ್ನು ಬಯಸಿದ ದೇಸಾಯಿಯ ಕೆಟ್ಟ ಚಟವನ್ನು ಇಲ್ಲವಾಗಿಸಲು ರೈತ ಹವಣಿಸಿದಾಗ ಊರಿನವರು ತಡೆದುಬಿಡುತ್ತಾರೆ ವಿಷಯ ತಿಳಿದ ದೇಸಾಯಿ ಆಕ್ರೋಶದಿಂದ ಆ ರೈತನ ಕಣ್ಣುಗಳನ್ನು ಕಿತ್ತಿಸಿ ಬಿಡುತ್ತಾನೆ. ಗಂಡನಿಗಾದ ಗತಿ ಕಂಡು ರೈತನ ಹೆಂಡತಿ ಹೊಳಗೆ ಬಿದ್ದು ಹಾರಿಕೊಳ್ಳುತ್ತಾಳೆ. ಆದರೆ ರೈತ ಮಾತ್ರ ದೇಸಾಯಿಯನ್ನು ಕೊಂದುತನ್ನ ಸೇಡನ್ನು ತೀರಿಸಿಕೊಳ್ಳುತ್ತಾನೆ. ತತ್ಪರಿಣಾಮವಾಗಿ ಶಿಕ್ಷೆಗೆ ಒಳಗಾಗುತ್ತಾನೆ. ಶಿಕ್ಷೆಯ ಅವಧಿ ಮುಗಿದ ಬಳಿಕ ಬೇರೆ ಊರಿಗೆ ಬಂದು ಹೊಸ ರೀತಿಯ ಏಕಾಂತ ಜೀವನ ನಡೆಸುತ್ತಾನೆ. ಊರಗೌಡರ ಬಳಿ ಕೆಲಸಕ್ಕೆ ನಿಂತು ಹೊಟ್ಟೆಪಾಡು ನೋಡಿಕೊಳ್ಳುತ್ತಾನೆ.

ವಿಶೇಷವೆಂದರೆ ನಿರೂಪಕನಿಗೆ ಕತೆ ಹೇಳುವ ಕುರುಡಜ್ಜನೆ ಕತೆಯಲ್ಲಿ ಬರುವ ರೈತನಾಗಿರುತ್ತಾನೆ. ಆದುದರಿಂದಲೇ ಇದು ಕುರುಡ ಹೇಳಿದ ಕತೆ. ಹೀಗಾಗಿ ಲಂಪಟನಾದ ಊರದೇಸಾಯನ ವಿರುದ್ಧ ಸಿಡಿದೆದ್ದು ಬದುಕನ್ನು ದಾರುಣ ಮಾಡಿಕೊಂಡ ವ್ಯಕ್ತಿಯ ಶೋಷಿತ ಬದುಕು ಇಲ್ಲಿದೆ.

ಗಿರಿಜಾ ಕಂಡ ಸಿನಿಮಾ ಕಟ್ಟೀಮನಿಯವರಿಗೆ ಹೆಸರು ತಂದುಕೊಟ್ಟ ಕತೆ. ಬಹುತೇಕ ಮಂದಿ ಉದಾಹರಿಸುವ ಮತ್ತು ಉಲ್ಲೇಖಿಸಿರುವ ಕತೆಗಳಲ್ಲಿ ಇದೂ ಒಂದು. ಕತೆಯ ವಸ್ತು ಸಾಮಾಜಿಕವಾದರೂ ಕೌಟುಂಬಿಕ ಆವರಣವೊಂದರ ಪರಸ್ಪರ ಗಂಡ ಹೆಂಡತಿಯ ಚಿತ್ರಣದಲ್ಲಿಯೇ ಕತೆಯನ್ನು ಬೆಳೆಸಿಕೊಂಡು ಹೋಗಲಾಗಿದೆ. ಸಮಾಜದಲ್ಲಿನ ಅಸಮಾನತೆ ಮತ್ತು ಬಡತನದ ದಾರುಣ ಚಿತ್ರ ಕೊಡುವುದು ಲೇಖಕರ ಉದ್ದೇಶ. ಬಡತನ ಮತ್ತು ಸುಖಗಳು ಹೇಗೆ ವ್ಯಕ್ತಿಯನ್ನು ಕಾಡುತ್ತದೆಂಬುದು ಕತೆಯ ಉದ್ದಕ್ಕೂ ವರ್ಗಭೇದದ ವೈದೃಶ್ಯದ ನೆಲೆಯಲ್ಲಿ ವ್ಯಕ್ತವಾಗುತ್ತ ಹೋಗುತ್ತದಾದರೂ ಕತೆಯ ಒಂದು ಪಾರ್ಶ್ವ ಅಧಿಕ ಒತ್ತಾಸೆಗಳಿಂದ ವಿವರಿತಗೊಳ್ಳುತ್ತದೆ.

ಕೂಲಿಕಾರರ ಏಳ್ಗೆಗಾಗಿ ದುಡಿಯುವ ಹಾಗು ಅವರನ್ನು ಸಹಾನುಭೂತಿಯಿಂದ ಕಾಣುವ ಸಿದ್ಧರಾಮ ಸ್ವತಃ ಒಬ್ಬ ಕೂಲಿಕಾರ. ಅವನ ಪ್ರೀತಿಯ ಹೆಂಡತಿ ಗಿರಿಜಾಳ ಬಹುದಿನದ ಬೇಡಿಕೆಯೆನಿಸಿಕೊಂಡ ಸಿನಿಮಾವನ್ನು ತೋರಿಸಲು ನಗರಕ್ಕೆ ಬರುತ್ತಾನೆ. ನಿಜವಾದ ಸಿನಿಮಾ ಯಾವುದೆಂಬುದನ್ನು ತಿಳಿಸುವುದೇ ಲೇಖಕನ ಉದ್ದೇಶ. ಕತೆಯ ಪ್ರಾರಂಭ ಇದರ ಪ್ರವೇಶಿಕೆಯಾಗಿ ಬಂದಿದೆ. ಕಾಳಸಂತೆ ಕೋರರೊಂದಿಗೆ ಸಿದ್ಧರಾಮ ಹೊಡೆದಾಟಕ್ಕೆ ನಿಲ್ಲುವುದು ಅವನ ಚಿಂತನಾಧಾಟಿಯನ್ನು ಅನುಮಾನಿಸುವಂತೆ ಮೂಡಿದೆ. ಕಣ್ಣು ಬಿಟ್ಟು ಲೋಕ ನೋಡದ ಗಿರಿಜಾಳ ಒಳಗಣ್ಣು ತೆರೆಸುವಲ್ಲಿ ಅವನು ಸಫಲನಾದರೂ ಬದುಕನ್ನು ಕಾಣುವ ಅವನ ದೃಷ್ಟಿಕೋನ ಹೆಚ್ಚು

ಪಕ್ವಗೊಂಡಿಲ್ಲದಿರುವುದು ತಿಳಿದು ಬರುತ್ತದೆ. ಸಿದ್ಧರಾಮನ ಪಾತ್ರದಲ್ಲಿ ನುಡಿ ಮತ್ತು ನಡೆಯ ಔಚಿತ್ಯದ ಕಂದರವಿದೆ. ಕತೆಯ ಕೊನೆಯ ವಾಕ್ಯವೇ ಕತೆ ತಲುಪುವ ಅಂತಿಮ ನೆಲೆಯೂ ಆಗಿದೆ. 'ಗಿರಿಜಾ ಹೆಜ್ಜೆ ಹಾಕತೊಡಗಿದಳು ಚಿಕ್ಕಲಾಲಬಾಗಿಗೆ ಅಲ್ಲ ನಿಜ ಜೀವನದ ಕಡೆಗೆ.'[೧]

"ಈ ಕತೆಯಲ್ಲಿ ಬಡತನದ ಕರುಳಿರಿಯುವ ಚಿತ್ರವೇನೋ ಇದೆ. ಆದರೆ ಕತೆಗಾರರ ಹಟದ ಸಲುವಾಗಿ ಬಡತನದ ಶೊರೂಮ್ ಆಗಿ ಕತೆ ಪರಿಣಮಿಸುತ್ತದೆ. ಕಟ್ಟೀಮನಿಯರಲ್ಲಿ ಲೇಖಕರಿಗಿರಬೇಕಾದ ನೈಜಗುಣಗಳೆಲ್ಲ ಇವೆ. ಅವರು ಭಾಷೆಯನ್ನು ಸಜೀವವಾಗಿ ಉಪಯೋಗಿಸಬಲ್ಲರು. ಆದರೇ ಈ ಗುಣಗಳೆಲ್ಲ ಅವರ ಸಾಹಿತ್ಯೋದ್ದೇಶದ ಗುಂಗಿಗೆ ಬಲಿಯಾಗಿಬಿಡುತ್ತವೆ. ಹೀಗಾಗಿ ಯಾವ ಪಾತ್ರವೂ, ಸನ್ನೀವೇಶವೂ ಕಣ್ಣಮುಂದೆ ಕಟ್ಟದೆ ಸಮಸ್ಯೆಯೊಂದೆ ಓದುಗರನ್ನು ಮುತ್ತಿಬಿಡುತ್ತದೆ. "[೨] ನಿಜ ಜೀವನವನ್ನು ಸಾಕ್ಷಾತ್ತಾಗಿ ಪರಿಚಯಿಸಿ ಅದರ ದುಃಖದುಮ್ಮಾನಗಳನ್ನು ತಿಳಿಹೇಳುವ ಉದ್ದೇಶ ಸಿದ್ಧರಾಮನದು. ಗಿರಿಜಾ ಕಾಣುವುದು ಕೇವಲ ಪರದೆಯ ಮೇಲಿನ ಕೃತಕ ಸಿನಿಮಾವನ್ನಲ್ಲ, ನಿಜಜೀವನದ ಸಿನಿಮಾವನ್ನು ಮಾರ್ಕ್ಸ್‌ವಾದೀ ದೃಷ್ಟಿಯಿಂದ ಕಟ್ಟೀಮನಿ ಕತೆ ಕಟ್ಟಿದ್ದಾರೆ.ಸಮಾಜದ ಅಸಮಾನತೆ ಮತ್ತು ವರ್ಗಭೇದದ ಕ್ರೌರ್ಯಗಳು ಬಡಜನತೆಯನ್ನು ಶೋಷಿಸುವ ಪರಿ ಇಲ್ಲಿದೆ. ಆದರೆ ಕತೆಗಾರ ಅನುಸರಿಸಿರುವ ನಾಟಕೀಯತೆ ಕಣ್ಣಿಗೆ ರಾಚುತ್ತದೆ.

ಕಲಾಪ್ರೇಮಿಯೊಬ್ಬನ ಕಲಾಪ್ರೇಮದ ಪೊಳ್ಳುತನವನ್ನು ಜೀವನಕಲೆ ಕತೆಯು ಅನಾವರಣ ಮಾಡುತ್ತದೆ. ವಾಸ್ತವವಾಗಿ ಕಲಾಪ್ರೇಮ ಮತ್ತು ಕಲಾಪ್ರೇಮಿ- ಈ ಎರಡೂ ಪದಗಳ ಅರ್ಥಗಳು ಈ ಹೊತ್ತಿನ ಸಾಂಸ್ಕೃತಿಕ ಚರ್ಚೆ, ಅಧ್ಯಯನಗಳ ಸಂದರ್ಭದಲ್ಲಿ ಯಾವ ಪಾತ್ರ ವಹಿಸಿವೆ? ಎಂಬ ತಿಳಿವು ಅಲ್ಲಿರಲಿ, ಕಟ್ಟೀಮನಿಯವರು ಕಲಾರಸಿಕತೆ ಪಡೆದವನೆಂದು ತೋರಿಸಿಕೊಳ್ಳುವ ಶ್ರೀಮಂತನ ಡಾಂಭಿಕತನವನ್ನೂ ನಿಜಜೀವನದಲ್ಲಿ ಅವನ ವರ್ತನೆಯ ವಿಪರ್ಯಾಸವನ್ನೂ ಸೂಕ್ಷ್ಮವಾಗಿ ಗಮನಿಸಿ ದಾಖಲಿಸಲು ಪ್ರಯತ್ನ ಪಟ್ಟಿದ್ದಾರೆ. ಕಲೆಯನ್ನು ಮೆಚ್ಚುವ, ಪ್ರೀತಿಸುವ ಅಂಶಕ್ಕಿಂತ ಅಥವಾ ಅದರೊಟ್ಟಿಗೇ ಜೀವನವನ್ನೂ ಪ್ರೀತಿಸುವ, ಮೆಚ್ಚುವ ಮನೋಧರ್ಮ ಅಗತ್ಯವೆಂಬುದು ಇಲ್ಲಿನ ಪ್ರತಿಪಾದನೆ. ಕಲೆಯನ್ನು ಕೀರ್ತಿಸುವ ಅಂಶವನ್ನು ತಮ್ಮ ವ್ಯಕ್ತಿತ್ವದ ವರ್ಚಸ್ಸನ್ನಾಗಿ ಬಳಸಿಕೊಳ್ಳುವ ವ್ಯಕ್ತಿಗಳು ಅದರಿಂದ ಜನ ಸಾಮಾನ್ಯರ ಮುಗ್ಧತೆಯ ಮೆಚ್ಚುಗೆಯನ್ನು ಹೇಗೆ ಗಳಿಸಿಕೊಳ್ಳಬಲ್ಲರು ಎಂಬ ಸಮಾಜದ ನಯಾನಾಜೂಕಿನ ಮುಖವಾಡವನ್ನು ಲೇಖಕರು ತೋರಿಸಿಕೊಟ್ಟಿದ್ದಾರೆ.

ಐದುನೂರು ರೂಪಾಯಿಗಳ ಬೆಲೆ ಕೊಟ್ಟು ಭಿಕ್ಷುಕನ ಚಿತ್ರಪಟವನ್ನು ಕೊಳ್ಳುವ ರಾಯರು ಮತ್ತವರ ಹೆಂಡತಿ ಮನೆಗೆ ಬಂದ ನಿಜವಾದ ಭಿಕ್ಷುಕನನ್ನು ಕಂಡು ಅಸಹ್ಯಿಸಿಕೊಂಡು ಆಚೆ ಕಳುಹಿಸುತ್ತಾಳೆ. ಇಲ್ಲಿ ಹೊರಡುವ ವ್ಯಂಗ್ಯ ಮತ್ತು ಹೃದಯಹೀನ ಪರಿಸರ ಗಮನಾರ್ಹ. ಕಲೆಯನ್ನು ಮೆಚ್ಚುವ ಮನಸ್ಸೇನಿದೆ, ಒಟ್ಟಾರೆಯಾಗಿ ಅವೆಲ್ಲವೂ ಜೀವನವನ್ನು ಮೆಚ್ಚುವುದಿಲ್ಲವೆಂಬ ಸತ್ಯವನ್ನು ಹೊರಡಿಸುತ್ತದೆ. ಎಲ್ಲೋ ಕೆಲವು ಮನಸ್ಸುಗಳು ಮಾತ್ರ ಜೀವನ ಮತ್ತು ಕಲೆಗೆ ವ್ಯತ್ಯಾಸವಿಲ್ಲದ ಹಾಗೆ ಬದುಕುತ್ತವೆ. ನಿಜ ಜೀವನದಲ್ಲಿ ಇಲ್ಲದ ಕನಿಕರ,

ದಯೆಗಳು ಕಲೆಯ ಚೌಕಟ್ಟಿನಲ್ಲಿ ಅಳವಡುವ ದುರಂತದ ವಿಪರ್ಯಾಸವನ್ನು ಏನೆಂದು ಕರೆಯಬೇಕು ? ಜೀವನ ಮತ್ತು ಕಲೆ ಎಂದೇ ಶಿರ್ಷಿಕೆಯನ್ನು ಒಡೆದು ಅರ್ಥೈಯಿಸಿಕೊಳ್ಳಬೇಕು. ಆದರೆ ಕತೆ ತಾನಾಗಿಯೇ ಮೈ ಪಡೆಯದೆ ನಾಟಕೀಯವಾಗುತ್ತ ಸಿನಿಮೀಯವೆನಿಸುವ ಶೈಲಿಯಿಂದಾಗಿ ತನ್ನ ವಸ್ತು ಪರಿಣಾಮದಲ್ಲಿ ಕೊಂಚ ಜಾಳಾಗುತ್ತದೆ. "ಜೀವನದ ಟೊಳ್ಳುತನಕ್ಕೆ ಕನ್ನಡಿ ಹಿಡಿಯುವ ಲೇಖಕರ ಉದ್ದೇಶ ನೆರವೇರಿದೆಯಾದರೂ ಆ ಉದ್ದೇಶ ಕಲಾತ್ಮಕವಾಗಿ ಹೊಮ್ಮದೇ ತೀರ ವಾಚ್ಯವಾಗಿ ಚಪ್ಪಟೆಯಾಗಿ ಕಾಣಿಸಿಕೊಳ್ಳುತ್ತದೆಯಾದ್ದರಿಂದ ತನ್ನ ಪರಿಣಾಮ ರಮಣೀಯತೆಯನ್ನು ಕಳೆದುಕೊಳ್ಳುತ್ತದೆ. ಪ್ರತಿಕಾರಾದಿಯಾಗುತ್ತದೆ."೩

ಕಟ್ಟಿಮನಿಯವರ ಕತೆಗಳ ಪರಿಣಾಮ ಕೊನೆವರೆಗೂ ಗಂಭಿರವಾಗದೇ ಇರುವುದರ ಕಡೆಗೆ ಆಲೋಚನೆಯನ್ನು ಚುರುಕುಗೊಳಿಸುವಲ್ಲಿ ಈ ಮಾತುಗಳು ಸಹಕಾರಿ ಯಾಗುತ್ತವೆ. "ರಾಯರ ಡಾಂಬಕತೆಯೊಂದನ್ನನ್ನೇ ಬಯಲಿಗೆಳೆಯುವುದರಲ್ಲಿ ತತ್ಪರರಾದ ಕಟ್ಟೀಮನಿಯವರು ಜೀವನ ದರ್ಶನದ ಕಡೆಗೆ ಮನಸ್ಸು ಹಾಕುವುದಿಲ್ಲ. ಕತೆಯಲ್ಲಿಯೇನೋ ರಾಯರು ಡಾಂಬಿಕರಾಗಿ ಕಾಣುತ್ತಾರೆ. ಆದರ ಅದೊಂದು ಕೃತಿಯ ಮೇಲಿಂದಲೇ ಅವರ ಜೀವನವನ್ನು ಬೆಲೆಕಟ್ಟಬಹುದೇ ಎಂಬುದನ್ನು ಅವರು ಯೋಚಿಸುವುದಿಲ್ಲ."

'ದೀಪಾವಳಿಯ ಕತ್ತಲೆ' ಕತೆ ಕೂಡ ಗಾಡವಾದ ವರ್ಗಭೇದವನ್ನು ಕಣ್ಣಿಗೆ ಕಟ್ಟಿಕೊಡುವ ವಿಧಾನವನ್ನು ಅನುಸರಿಸಿದೆ. ಕಾರ್ಖಾನೆಯ ದರಿದ್ರ ಬದುಕನ್ನು ಹಳ್ಳಿಯ ಜೀವನದ ನೆನಪಿನೊಂದಿಗೆ ದಾಖಲು ಮಾಡುವ ಅನುಭವ. ಕಾರ್ಖಾನೆಯ ಕೆಲಸಗಾರ ಚಂದ್ರಮ್ಮನಿಗೆ ಉತ್ತಮರೀತಿಯಲ್ಲಿ ಬದುಕಬೇಕೆಂಬ ಹಂಬಲ ಕನಸುಗಳಿವೆ. ಅವನ ಅಸಹಾಯಕತೆ ಸಮಾಜದಲ್ಲಿನ ಅವನ ಕೆಳಸ್ಥಾನಗಳು ಹೆಂಡತಿಗೊಂದು ಸೀರೆ ತಂದುಕೊಡಲು ಸಾಧ್ಯವಾಗದ ಸ್ಥಿತಿಯನ್ನು ತಂದಿವೆ. ಚಂದ್ರಣ್ಣನ ಪ್ರಜ್ಞೆಯ ಮೂಲಕ ನಿರ್ಗತಿಕ ಬದುಕನ್ನು ಅನಾವರಣ ಮಾಡಲಾಗಿದೆ. ಪರಿಸ್ಥಿಯನ್ನು ಅರ್ಥಮಾಡಿಕೊಂಡು ಅನುನಯದಿಂದ ಜೀವನ ನಿರ್ವಹಣೆ ಮಾಡುವ ಹೆಂಡತಿಯಾಗಿ ಶಾರದೆ ಚಿತ್ರಿತಳಾಗಿದ್ದಾಳೆ. ದೀಪಾವಳಿಯ ದಿನ ಜಗತ್ತು ಹರ್ಷಿಸುವ ಪಡೆ ಒಂದು ಕಡೆಯಯಾದರೆ ಮಾಮೂಲೀ ಕತ್ತಲ ಬದುಕನ್ನು ಸವೆಸುವ ಪಡೆ ಮತ್ತೊಂದೆಡೆಯಲ್ಲಿದೆ.

ಜೀವನದ ಒಂದು ದಿನದ ಚಿತ್ರಣ ಇಲ್ಲಿದ್ದರೂ ಅದು ಪ್ರಾತಿನಿದಿಕವಾಗಿದೆ. ಆಕರ್ಷಕ ವಸ್ತುವಿಲ್ಲದಿದ್ದರೂ ರೋಷಾವೇಶ , ಸಿಟ್ಟು, ನೋವು ಎಲ್ಲವೂ ಅಭಿವ್ಯಕ್ತಗೊಂಡಿವೆ. ಕತೆ ಅವಕಾಶದಲ್ಲಿ ಕೊನೆಗೊಳ್ಳುವ ಮೆಚ್ಚುವ ಸಂಗತಿ. ಬದುಕಿನ ದೀನಾದಾರುಣತೆಯಲ್ಲಿ ಮಾನವ ಸಹಜವಾದ ಆಶಾವಾದದ ಆರೋಗ್ಯ ಭಾವನೆ ಕತೆಯಲ್ಲಿ ವ್ಯಾಪಿತಗೊಂಡಿರುವುದು ಶ್ಲಾಘನೀಯ. ಈ ತರುಣದಂಪತಿಗಳ ಕತ್ತಲ ಬದುಕಿಗೆ ಚೌಕಟ್ಟಾಗಿ ಜಗತ್ತಿನ ದೀಪಾವಳಿ ಹಬ್ಬದ ಸಂಭ್ರಮವಿದೆ. "ಬೆಳಕಿನ ಹರ್ಷದ ದೀಪಾವಳಿಯ ಚೌಕಟ್ಟಿನಲ್ಲಿ ಈ ತರುಣದಂಪತಿಗಳ ಬಾಳನ್ನು ಕತ್ತಲಲ್ಲಿ ಇಟ್ಟಿರುವುದು ಅರ್ಥವತ್ತಾಗಿದೆ. ಆದರೆ ಸ್ವಲ್ಪ ಸುಲಭದ ತಂತ್ರ ಸುಟ್ಟು ಬೂದಿಯಾಗುವ ಪಟಾಕಿಗಳು, ಸಿಗರೇಟುಗಳ ಚೌಕಟ್ಟಿನಲ್ಲಿ ಸುಟ್ಟುಬಾದಿಯಾಗುತ್ತಿರುವ ತರುಣ ದಂಪತಿಗಳ ಆಶಾಲತೆ (ಅದು ಸೌದೆ, ಬೆಂಕಿಪೆಟ್ಟಿಗೆ

ಇಲ್ಲದ ಮನೆಯಲ್ಲೇ!) ಎನ್ನುವುದು ಕ್ರೂರ ಶೋಷಣೆಗೆ ಸಂಕೇತವಾಗುತ್ತದೆ. ಆದರೆ ನಿಜವಾದ ಪ್ರಗತಿಶೀಲ ಸಾಹಿತ್ಯದ ಒಂದು ಗುಣ ಇಲ್ಲಿ ಎದ್ದುಕಾಣುತ್ತದೆ. ಅಧಮ್ಯ ಆಶಾಭಾವನೆ, ಬದುಕು ಉತ್ತಮಗೊಳ್ಳುತ್ತದೆ ಎಂಬ ಭರವಸೆ. ಜೊತೆಗೆ ಬದುಕಿನ ಕ್ರೂರ ಉರಿಯಲ್ಲೂ ಬತ್ತದ ಪ್ರೇಮ ಅಂತಃಕರಣ."

ಹೊಸವರ್ಷದ ಹಳೆಯ ರಾತ್ರಿ ಕತೆ ಹೆಚ್ಚೂ ಕಡಿಮೆ ಈ ತೆರನಾದದ್ದೇ ಆದರೆ ಪ್ರಸ್ತುತ ಕತೆ ಅದಕ್ಕಿಂತ ಪರಿಣಾಮಕಾರಿಯಾಗಿದೆ. ಕಟ್ಟೀಮನಿ ಬದುಕಿನ ಪ್ರಾರಂಭಿಕ ಘಟ್ಟದ ಪ್ರಾತಿನಿಧಿಕ ಕತೆಯನ್ನಾಗಿ ಇದನ್ನು ಶೇಷಗಿರಿರಾವ್ ಕಾಣುತ್ತಾರೆ. ಕಾರ್‌ವಾನ್ ಕೂಡ ಈ ಮಾತನ್ನು ಹೇಳಿಸಿಕೊಳ್ಳುವ ಸಾಮರ್ಥ ಪಡೆದಿದೆ. ಪ್ರಗತಿಶೀಲ ಧೋರಣೆಗಳು ಇಂಥ ಕತೆಗಳಲ್ಲೆ ಕೆಲಸ ಮಾಡುವ ರೀತಿ ಗಮನಾರ್ಹ. ಬಡತನದ ಚಿತ್ರಣ ಅಪ್ರತಿಮವಾಗಿ ಬರುವುದು ನಿರಂಜನ, ಕಟ್ಟೀಮನಿಯವರಲ್ಲಿ ಹೆಚ್ಚು, ಚದುರಂಗರಲ್ಲೆ ಕಡಿಮೆ.

ಹೊಸ ವರ್ಷದ ಹಳೆಯ ರಾತ್ರಿಯಲ್ಲಿ ಬಡತನವನ್ನು ಅತಿರೇಕವೆನಿಸುವಷ್ಟು ಏಕಮುಖ ನೆಲೆಯಿಂದ ವರ್ಣಿಸಲಾಗಿದೆ. ಬಡತನದ ಭೀಕರತೆಯೊಂದೆ ಈ ಕತೆಯಲ್ಲಿ ಕಂಡುಬರುವ ಅಂಶ. ತಮ್ಮ ಮಗುವಿನ ಹಸಿವನ್ನು ತೀರಿಸಲು ಕೊಡಬೇಕಾದ ಆಹಾರವನ್ನು ಸಂಪಾದಿಸಲಾಗದ ತಂದೆಯಾಗಿ ಇಲ್ಲಿನ ಕರಿಯ ಚಿತ್ರಿತಗೊಂಡಿದ್ದಾನೆ. ಅದಕ್ಕೆ ಕಾರಣವಿದೆ.

ಹೊಸವರ್ಷದ ಮುನ್ನಾ ದಿನವಾದ ಅಂದು ಎಲ್ಲೆಡೆಯೂ ರಜ ಮತ್ತು ಜನದ ಮಜ. ಕೂಲಿನಾಲಿ ಮಾಡಿ ಬದುಕಬೇಕಾದ ಅನಿವಾರ್ಯತೆಯಿರುವ ಕರಿಯ ಮತ್ತಂಥವರ ವ್ಯಕ್ತಿಗಳಿಗೆ ಹೊಸವರ್ಷದಲ್ಲೂ ಹಳೆಯ ಗೋಳೆ ಗತಿಯಾಗುತ್ತದೆ. ಕರಿಯನ ಗುಡಿಸಲಿನ ಪಕ್ಕದಲ್ಲಿರುವ ಶ್ರೀಮಂತರ ಸೌಧವೊಂದರಲ್ಲಿ ನಡೆಯುವ ಹೊಸವರ್ಷದ ಸಂಭ್ರಮದ ಆಚರಣೆಗಳನ್ನು ವೈದೃಶ್ಯವಾಗಿ ತರಲಾಗಿದೆ. ಬಡತನದ ಕಾರಣವಾಗಿ ಹೊಸವರ್ಷದಲ್ಲೂ ಹಳೆಯ ಗೋಳನ್ನೇ ಪ್ರತಿದಿನವೂ ಹೊಸಹೊಸದಾಗಿ ಅನುಭವಿಸಬೇಕಾದ ದುರಂತ ಇಲ್ಲಿಯದು. ಕತೆ ಉಳಿದ ಯಾವ ಆಯಾಮಗಳನ್ನು ಗಮನಿಸದೆ ಈ ಚಿತ್ರಣಕ್ಕಷ್ಟೇ ಸೀಮಿತವಾಗಿದೆ. ವೈದೃಶ್ಯ ಸ್ಥಾಪಿಸುವ ಕಟ್ಟೀಮನಿ ಅಷ್ಟಕ್ಕೇ ತಮ್ಮ ಕತೆಯನ್ನು ನಿಲ್ಲಿಸುತ್ತಾರೆ. ಒಂದು ರೀತಿಯಲ್ಲಿ ಹೇಳುವುದಾದರೆ ಕಟ್ಟೀಮನಿ ಅಷ್ಟಕ್ಕೆ ತಮ್ಮ ಕತೆಯನ್ನು ನಿಲ್ಲಿಸುತ್ತಾರೆ. ಒಂದು ರೀತಿಯಲ್ಲಿ ಹೇಳುವುದಾದರೆ ಕಟ್ಟೀಮನಿ ಆಶಯಕ್ಕಾಗಿ ಕತೆ ಬರೆಯುವರು. ಬಡವ - ಶ್ರೀಮಂತ ಭೇದಗಳು ಕಣ್ಣಿಗೆ ಹೊಡೆಯುವಷ್ಟು ಢಾಳಾಗಿ ಚಿತ್ರಿಸುವ ಕಪ್ಪು ಬಿಳುಪು ಇಂಥಲ್ಲಿ ಅಧಿಕ. ಆದರೂ ಕತೆಯಲ್ಲಿ ಕಲಾವಂತಿಕೆಯಿಲ್ಲ. ಬಡತನದ ದಾರುಣತೆಯನ್ನು ಹೆಚ್ಚಿಸಲು ಅನಾವಶ್ಯಕವಾಗಿ ಶ್ರೀಮಂತರ ವೈಭವವನ್ನು ಎಳೆದಾಡಿ ಹಿಂಸಿಸದಂತೆ ಕಾಣುತ್ತದೆ. ಹೊರಗೆ ಕಾಣುವ ವಸ್ತು ನೇರವಾಗಿ ಯಾವ ರಸ ಪರಿವರ್ತನೆಯೂ ಇಲ್ಲದೆ ಕಥಾಲೋಕಕ್ಕೆ ಪ್ರವೇಶಿಸಿದಂತಿದೆಯಾದ್ದರಿಂದ ಸಫಲ ಕಲಾಪರಿಣಾಮವನ್ನು ಬೀರುವುದಿಲ್ಲ. ಕಲಾವಿದನ ನಿರ್ಲಿಪ್ತತೆಯೂ ಕಾಣದೆ ಪಕ್ಷಪಾತ ದೃಷ್ಟಿ ಎದ್ದು ತೋರುತ್ತದೆ."೬

ಹೊಸ ವರ್ಷವನ್ನು ಸಂತೋಷದಿಂದ ಆಚರಿಸಲಾಗಲೀ ಹೊಸತರಹದ ಬದುಕನ್ನು ಬದುಕುವುದಾಗಲೀ ಸಮಾಜದ ಬಡಜನತೆಗೆ ಎಂದಿಗೂ ಸಾಧ್ಯವಾಗದೆಂಬ ನಿಲುವು ಇಲ್ಲಿನದು.

ಬೂಟ್ ಪಾಲೀಶ್ ಕತೆ ಕನ್ನಡ ಸಣ್ಣಕತೆಗಳ ಪ್ರಾತಿನಿದಿಕ ಸಂಕಲನಗಳಲ್ಲಿ ತಪ್ಪದೇ ಸೇರಿರುವ ಕತೆಯಾಗಿ ಓದುಗರ ಗಮನ ಸೆಳೆದಿದೆ. ಬಡವ- ಬಲ್ಲಿದರ ನಡುವಿನ ಕಂದರಗಳನ್ನು ಕೋಮಲಭಾವವೊಂದರ ಮೂಲಕ ಹಿಡಿದಿಡುವ ಪ್ರಯತ್ನ ಇಲ್ಲಿದೆ. ಬೂಟ್ ಪಾಲೀಶ್ ಮಾಡುವ ಹುಡುಗನೇ ಈ ಕತೆಯ ನಿರೂಪಕನೂ ಕೂಡ. ಶ್ರೀಮಂತರ ಹೆಣ್ಣೊಬ್ಬಳು ಅತ್ಯಾಚಾರಕ್ಕೊಳಗಾಗಿ ಅದರ ಪಲವೆಂಬಂತೆ ಜನಿಸಿದ ಮಗುವನ್ನು ತ್ಯಜಿಸಿ ಕಣ್ಮರೆಯಾಗಿರುತ್ತಾಳೆ. ಆ ಅನಾಥ ಶಿಶುವನ್ನು ಭಿಕ್ಷುಕ ದಂಪತಿಗಳು ಸಲಹಿ ಆರೈಕೆ ಮಾಡಿರುತ್ತಾರೆ. ಬೂಟ್ ಪಾಲೀಶ್ ಮಾಡಿ ಜೀವನ ನಿರ್ವಯಿಸುವ ಆ ಹುಡುಗ ಹೆತ್ತತಾಯಿಗಾಗಿ ಚಡಪಡಿಸುತ್ತಾನೆ. ಹೆತ್ತವಳನ್ನು ಒಂದು ಬಾರಿಯು ಕಂಡಿರದ ಅವನಿಗೆ ಅವಳನ್ನು ಕಾಣಬೇಕೆಂಬುದೇ ಜೀವನದ ತವಕ, ಅಧಮ್ಯ ಹಂಬಲ. ಸಾಕುತಾಯಿ ಭಿಕ್ಷುಕಿ ಸತ್ತಿರುತ್ತಾಳೆ. ಒಟ್ಟಾರೆ ಅವನದು ದಿಕ್ಕಿಲ್ಲದ ಅಸಹಾಯಕ ಬದುಕು. ಹೀಗಾಗಿ ಆತ ಕಂಡ ಕಂಡ ಹೆಂಗಸರಲ್ಲೆ ತನ್ನ ತಾಯಿಯ ಬಿಂಬ ಹುಡುಕ ಹೊರಡುವ ಅವನ ರೀತಿ ನೀತಿ ವಿಚಿತ್ರವೆನಿಸಿಬಿಡುತ್ತದೆ. ಇದನ್ನು ಮಮತೆಯ ಹೆತ್ತತಾಯಿಯನ್ನು ಕಾಣಬೇಕೆಂಬ ಅವನ ತ್ರೀ ತುಡಿತದ ಹಿನ್ನೆಲೆಯಲ್ಲಿ ನೋಡಬೇಕಾಗುತ್ತದೆ. ಅಷ್ಟೇನು ಜೀವಂತವಿಲ್ಲದ ನಾಟಕೀಯ ಸನ್ನಿವೇಶವೇ ಈ ಕತೆಯ ಹಲವು ಘಟನೆಗಳನ್ನು ನಡೆಸಿಕೊಟ್ಟಿದೆ. ಒಂದು ದಿನ ಕಾರಿನಿಂದಿಳಿದ ಶ್ರೀಮಂತೆಯಬ್ಬಳು ಬೂಟ್ ಪಾಲೀಶ್ ಹುಡುಗನನ್ನು ನೋಡಿ ಕನಿಕರಪಟ್ಟು ಹಣ ನೀಡಿ ಹೊರಟುಹೋಗುವ ಪ್ರಸಂಗವೊಂದು ನಡೆಯುತ್ತದೆ.

ಈ ಪ್ರಸಂಗವು ಸ್ವತಃ ಆ ಹುಡುಗನ ತಾಯಿಯೇ ಪ್ರತ್ಯಕ್ಷವಾದಳೆಂದು ಆ ಹುಡುಗ ಸ್ಥಳ ಕಾಲಗಳ ಇರುವಿಕೆಯನ್ನು ಮರೆತು ಅವಳನ್ನು ಇನ್ನೇನು ತಾಯಿಯಂತೆ ಪರಿಗಣಿಸುತ್ತಾನೆಂದೂ ವಾಚಕ ಮಹಾಶಯ ಅಂದುಕೊಳ್ಳುವಂತೆ ಬಂದಿದೆ. ಈ ಘಟನೆಯ ನಂತರವೂ ಅವನೂ ತಾಯಿಗಾಗಿ ಅರಸುವ , ಹಂಬಲಿಸುವ ಬಗೆಯಿಂದಾಗಿ ಆ ಶ್ರೀಮಂತೆ ಕೇವಲ ಕನಿಕರಪಟ್ಟು ವರ್ತಿಸಿದ ಅನುಕಂಪ ಹೃದಯಿ ಎಂಬ ಅರಿವು ಉಂಟಾಗುತ್ತದೆ. ಈ ಪ್ರಸಂಗ ಕೂಡ ಭಾವನಾತ್ಮಕ ಜಗತ್ತಿಗೆ ಸಂಬಂಧಿಸಿದ್ದು. ಆದರೆ ಭಿಕ್ಷುಕಿ ಸಾಕುತಾಯಿಯ ವಾತ್ಸಲ್ಯವನ್ನು ಅನುಭವಿಸಿಯೂ ಆ ಹುಡುಗ ತನ್ನನ್ನು ನಿರ್ದಾಕ್ಷಿಣ್ಯವಾಗಿ ಎಸೆದು ಹೋದ ಹೆತ್ತತಾಯಿಗಾಗಿ ತನ್ನಜೀವನಪೂರ್ತಿ ತವಕದಿಂದ ಕಾಯುವ ಔಚಿತ್ಯವನ್ನು ಪ್ರಶ್ನಿಸಬೇಕಾದದ್ದೇ.

ಮಾತೃವಾತ್ಸಲ್ಯದ ಧನ್ಯತೆಯನ್ನು ಮೇರೆವರಿಯದ ಮಾತುಗಳಲ್ಲಿ ಬಣ್ಣಿಸುವವರೆಗೂ ಈ ಪ್ರಶ್ನೆ ಕೊಂಡೊಯ್ಯುತ್ತದೆ. ದೀನತೆಯ ಬದುಕಿನ ಅಡಿಯಲ್ಲಿ ಆರ್ಥಿಕ ದುಃಸ್ಥಿತಿಯ ವಾಸ್ತವದಲ್ಲಿ ದಿನಗಳೆವ ಹುಡುಗ ತನ್ನ ಭಾವುಕ ಮನಸ್ಸಿನ ಬೇಡಿಕೆಯನ್ನು ಲಕ್ಷ್ಯದಲ್ಲಿಡುತ್ತಾನಂಬುದು, ಅವನು ತುಂಬ ಸೂಕ್ಷ್ಮದ ಹುಡುಗನಾಗಿರಬೇಕು.

"ಮುದ್ದು" ಕತೆಯನ್ನು ಈ ವಲಯದಲ್ಲೇ ಸೇರಿಸಲು ಕಾರಣವಿದೆ. ಈ ಕತೆ ಕೂಡ ವರ್ಗನೆಲೆಗಳನ್ನು ಪ್ರತಿನಿಧಿಸುತ್ತದೆ. ಒಂದು ನಾಯಿಯ ಸುತ್ತ ಹರಡಿಕೊಂಡ ಕತೆಯಿದು. ಹರಡಿಕೊಂಡ ಕತೆ ಎಂಬುದಕ್ಕಿಂತ ಒಂದು ಸಾಕು ಪ್ರಾಣಿಯನ್ನು ಮಮತೆಯ ಪರಿಸರದಿಂದ ಬೇರ್ಪಡಿಸಿದ ಕತೆ ಎಂದರೆ ಹೆಚ್ಚು 'ಉಚಿತವಾಗುತ್ತದೆ. ಪುಟ್ಟ ಮಕ್ಕಳ ಮಾನಸಿಕ ಸ್ಥಿತಿ ಮತ್ತು ನಾಯಿಯಂಥ ವಾತ್ಸಲ್ಯಜೀವಿಯ ವರ್ತನೆಯ ರೀತಿ ಎರಡೂ ಏಕಕಾಲಕ್ಕೆ ಈ ಕತೆಯಲ್ಲಿ ಸ್ಥಾನ ಪಡೆದಿದೆ.

ಕೆಲಸ ಕಳೆದುಕೊಂಡ ರಂಗಣ್ಣ ಪರ ಊರಿಗೆ ಅಥವಾ ಹಿಂದೆ ಅವನು ವಾಸ ಮಾಡುತ್ತಿದ್ದ ಹಳ್ಳಿಗೆ ಸಂಸಾರ ಸಮೇತ ಹೊರಟಾಗ ಸಮಸ್ಯೆ ಎದುರಾಗುತ್ತದೆ. ಕಳೆದ ಕೆಲವು ತಿಂಗಳಿನಿಂದ ಮನೆಯಲ್ಲೇ ಆಶ್ರಯ ಪಡೆದು, ಮಗ ವಸಂತನ ಪ್ರೀತಿಗೆ ಪಾತ್ರವಾಗಿದ್ದ. 'ಮುದ್ದು' ಹೆಸರಿನ ನಾಯಿಯನ್ನು ಜೊತೆಯಲ್ಲಿ ಒಯ್ಯಲು ಸಾದ್ಯವಾಗದಿರುವುದು ಕೆಲಸವಿಲ್ಲದೇ ನಿರುದ್ಯೋಗಿಯಾಗಿ ಜೀವನ ನಡೆಸಬೇಕಾದ ಮುಂದಿನ ಘೋರ ದಿನಗಳಲ್ಲಿ ತಮಗೇ ಸಂಕಷ್ಟ ಒದಗಿರುವಾಗ ಜೊತೆಯಲ್ಲಿ ನಾಯಿಯನ್ನೂ ಕರೆದುಕೊಂಡು ಹೋಗುವುದು ಮನೆಯ ಯಜಮಾನನಾದ ರಂಗಣ್ಣನಿಗೆ ಇಷ್ಟವಾಗದ ವಿಷಯವಾಗುತ್ತದೆ.

ಎಷ್ಟೇ ಹಟ ಮಾಡಿದರೂ ಮಗನ ಆಸೆಯಂತೆ ಮುದ್ದುವನ್ನು ಜೊತೆಯಲ್ಲಿ ಒಯ್ಯುವುದಿಲ್ಲ. ನಾಯಿ ಬಹಳಷ್ಟು ಆಕ್ರಂದನಗೈಯ್ಯುತ್ತ ಸಾಧ್ಯವಾದಷ್ಟು ದೂರ ರೈಲಿನೊಂದಿಗೆ ಓಡುತ್ತಾ ಸುಸ್ತಾಗಿ ಅಸಹಾಯಕತೆಯಿಂದ ಮೊದಲಿದ್ದ ಜಾಗಕ್ಕೇ ಮರಳುತ್ತದೆ.

ಮುಂದಿನ ಘಟ್ಟದಲ್ಲಿ ಆ ಮುದ್ದು ಹೇಗೆ ಜೀವ ಸವೆಸಿ ಅಂತಿಮದಲ್ಲಿ ಪೋಲಿಸರ ಆಜ್ಞೆಯಂತೆ ಗುಂಡಿನೇಟಿನಿಂದ ಮೃತವಾಗುತ್ತದೆಂಬುದರ ಚಿತ್ರಣವಿದೆ.

ರಂಗಣ್ಣ, ವಸಂತ ಮತ್ತು ಅವನ ತಾಯಿಯ ಚಿತ್ರಣ ಕತೆಯಲ್ಲಿ ಮುಂದುವರಿಯದೇ ಅಷ್ಟಕ್ಕೆ ನಿಲ್ಲುತ್ತದೆ. ಕತೆಯ ಶೀರ್ಷಿಕೆಗನುಗುಣವಾಗಿಯೇ 'ಮುದ್ದು' ಕತೆಯಲ್ಲಿ ಪ್ರಧಾನಪಾತ್ರವಾಗಿ ಬಂದಿದೆ. ಮನುಷ್ಯನ ಅದರಲ್ಲೂ ಮಕ್ಕಳ ಭಾವಪ್ರಪಂಚಕ್ಕೇ ಸಂಬಂಧಿಸಿದ ಎಳೆಯೊಂದನ್ನು ಮೀಟಿ ತರಂಗಗಳನ್ನು ಹೊಮ್ಮಿಸಲಾಗಿದೆ. ಆರ್ಥಿಕ ಸಂಕಷ್ಟಗಳು ಪ್ರೀತ ವಾತ್ಸಲ್ಯಗಳಿಗೆ ಯಾವ ರೀತಿಯ ಅಡ್ಡಿ ಆತಂಕಗಳನ್ನು ಒಟ್ಟುತ್ತದೆಂಬುದು ಈ ಕೆತೆಯ ಆಶಯವಾಗಿದ್ದು, ಇದು ಕತೆಯಲ್ಲಿ ಕೇವಲ ವಾಚ್ಯದ ನೆಲೆಯಲ್ಲಿಯೇ ನಿಂತಿಲ್ಲ.

'ಸೆರೆಯಿಂದ ಹೊರಗೆ ' ಪ್ರತಿಭಟನಾತ್ಮಕ ಕತೆ. ಕಪಟ ಸ್ವಾಮಿಗಳನ್ನೂ ಸಮಾಜದ ದಾನಸವಲತ್ತುಗಳನ್ನು ಪಡೆದು ನಡೆಸಲಾಗುವ ಉಚಿತ ವಿದ್ಯಾರ್ಥಿನಿಲಯಗಳ ಕೆಲವೊಂದು ದುಃಸ್ಥಿತಿಗಳನ್ನೂ ಈ ಕತೆ ಬಯಲು ಮಾಡುವ ಉದ್ದೇಶದಿಂದ ಕೂಡಿದೆ. ಈಗಾಗಲೇ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿ ಹೋರಾಟದ ಮನೋಭಾವವನ್ನು

ಮೈಗೂಡಿಸಿಕೊಂಡಿದ್ದ ರಾಜಣ್ಣನು ಏಕಾಂಗಿಯಾಗಿ ನಿಂತು ಸ್ವಾಮೀಜಿ ನಡೆಸುವ ವಿಚಿತ್ರ ರೀತಿಯ ಶಿವಪೂಜೆ ಮತ್ತು ಉದ್ಧಟತನ, ಕ್ರೌರ್ಯ, ಅಮಾನವೀಯತೆಗಳನ್ನು ಖಂಡಿಸುತ್ತಾನೆ. ಶಿವಪೂಜೆಯ ನೆಪದಲ್ಲಿ ತಡವಾಗಿ ಬಂದವರಿಗೆ ವಿಧಿಸುವ ಶಿಕ್ಷೆಗಳು ಅತಿ ಘೋರವಾಗಿದ್ದು, 'ಪ್ರಸಾದ ನಿಲಯ'ವು ಹೊರಗೆ ಪಡೆದಿದ್ದ ಸದಾಭಿಪ್ರಾಯಗಳಿಲ್ಲ ಒಳಹೊಕ್ಕು ನೋಡದೆ ಬಂದಂಥವಾಗಿರುತ್ತವೆ. ಮರುಳಯ್ಯನಿಗೆ ವಿಧಿಸುವ ಶಿಕ್ಷೆ ಅತಿಭೀಕರವಾದುದಾಗಿರುತ್ತದೆ. ಶಿಕ್ಷೆಯ ಕಾರಣ ತಂಗಳು ರೊಟ್ಟಿ ತಿಂದುದರಿಂದ ಆರೋಗ್ಯ ಹಾಳಾಗಿ ಅವನು ಶಿವಪೂಜೆಗೆ ಬರಲಾಗದ್ದರಿಂದ ಅವಾಚ್ಯದ ಬೈಗುಳ ಮತ್ತು ಕಾಲಿನ ಒಡೆತಗಳನ್ನು ಬಳುವಳಿಯಾಗಿ ಪಡೆಯಬೇಕಾಗುತ್ತದೆ. ಸ್ವಾಮೀಜಿಯ ದುರ್ವರ್ತನೆಯನ್ನು ರಾಜಣ್ಣ ಪ್ರಶ್ನಿಸಿ ಪ್ರತಿಭಟಿಸುತ್ತಾನೆ. ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ್ದರ ಹಿನ್ನೆಲೆಯೇ ಅವನ ಎಲ್ಲಾ ಪ್ರತಿಭಟನೆಗೆ ಶಕ್ತಿ ತಂದಿದ್ದೆಂಬ ಭಾವ ಕತೆಯಲ್ಲಿ ಮೂಡಿದೆ.

ರಾಜಣ್ಣ, ಮರುಳಯ್ಯರನ್ನು ನಿಲಯದಲ್ಲೇ ಉಳಿಸಿಕೊಳ್ಳಬೇಕೆಂಬ ಹಟದಿಂದ ಉಳಿದ ವಿದ್ಯಾರ್ಥಿಗಳೂ ನಿರಶನ ಕೈಗೊಳ್ಳುತ್ತಾರೆ. ಆದರೆ ಉಳಿದ ವಿದ್ಯಾರ್ಥಿಗಳು ಅನಗತ್ಯವಾಗಿ ಹಿಂಸೆ ಅನುಭವಿಸುವುದು ಬೇಡವೆಂಬ ಕಾರಣದಿಂದ ರಾಜಣ್ಣನೇ ಮರುಳಯ್ಯನೊಡಗೂಡಿ ಪ್ರಸಾದ ನಿಲಯದಿಂದ ಈಚೆ ಬರುತ್ತಾನೆ. ಕತೆ ಹುಚ್ಚು ಮನಸ್ಸಿನ, ವಿಕೃತ ನಡಾವಳಿ ಹೊಂದಿದ ಸ್ವಾಮೀಜಿಯ ಏಕಾಂಗಿತನದ ಭಜನೆಯಿಂದಲೇ ಅಂತ್ಯಗೊಳ್ಳುತ್ತದೆ. ವ್ಯವಸ್ಥೆಯ ಯಥಾಸ್ಥಿತಿಯೇ ಮುಂದುವರಿಯುತ್ತದೆಂಬ ಸೂಚನೆಯನ್ನು ಇದು ಕೊಡುತ್ತದೆ. ಇಂಥ ಉಚಿತ ವಿದ್ಯಾರ್ಥಿ ನಿಲಯಗಳ, ಅದರ ಘೋರಸ್ವರೂಪದ ಸೆಲೆಯಿಂದ ಹೊರಗೆ ಬಂದು ಕಷ್ಟಪಟ್ಟು ಬದುಕವುದೇ ಹೆಚ್ಚಿನ ನೆಮ್ಮದಿ ತರುವಂಥದೆಂಬ ಅಭಿಪ್ರಾಯ ಇಲ್ಲಿದೆ.

ರಾಜಣ್ಣನ ಪ್ರತಿಭಟನೆಯಾಗಲೀ ಮರುಳಯ್ಯನು ಅನುಭವಿಸುವ ಮಾನಸಿಕ, ದೈಹಿಕ ಹಿಂಸೆಗಳಾಗಲೀ ಸ್ವಾಮಿಯ ದುರ್ವರ್ತನೆಗಳಾಗಲೀ ಎಲ್ಲವೂ ಪ್ರಸ್ತುತ ಸಮಾಜದ ಕೈಗನ್ನಡಿಯಾಗಿದೆ. ಕಟ್ಟೀಮನಿ ಕಪಟ ಸ್ವಾಮಗಳ ವಿರುದ್ಧ ಬಂಡಾಯ ಎದ್ದವರು. ಅವರ ಕಾದಂಬರಿಗಳಲ್ಲಿ ಇಂಥ ವಿಚಾರಗಳು ನಿರ್ದಾಕ್ಷಿಣ್ಯವಾಗಿ ಮತ್ತು ನಿರ್ಭಿತವಾಗಿ ಅನಾವರಣಗೊಂಡಿವೆ. ಈ ದೃಷ್ಟಿಯಿಂದ ಈ ಕತೆ ಗಮನಾರ್ಹ. ಆದರೂ ಈ ಕತೆಯಲ್ಲಿ ಪ್ರತಿಭಟನೆ ಧನಾತ್ಮಕವಾಗದ ಸಾಧ್ಯತೆಗಳನ್ನು ಕುರಿತು ಯೋಜಿಸಬೇಕೆನಿಸುತ್ತದೆ.

ನಿರ್ದಿಷ್ಟ ಪಾತ್ರಗಳ ಮೂಲಕ ಉದ್ದೇಶಿತ ಆಶಯ, ಆಗುಹೋಗುಗಳು ಮತ್ತು ತೀರ್ಮಾನಗಳನ್ನು ನೇರವಾಗಿ ಮುಟ್ಟಿಸುವ ಪರಿ ಇಲ್ಲಿನದು. ಕಟ್ಟೀಮನಿಯವರ ಕಥನ ರೀತಿಯೇ ಹೀಗೆ ಕಟ್ಟೀಮನಿಯಿಂದ ಕತೆ ಆಗದೇ ಆಗಿಸಿಕೊಳ್ಳುತ್ತದೆ.

ಈ ಒಂಭತ್ತು ಕತೆಗಳನ್ನು ಗಮನಿಸಿದಾಗ ಕಟ್ಟೀಮನಿಯವರು ವರ್ಗನೆಲೆಗಳನ್ನು ಪ್ರಗತಿಶೀಲ ಸಾಹಿತ್ಯ

ಚಳವಳಿಯ ಸಿದ್ಧಾಂತಕ್ಕೆ ಪೂರಕವಾಗಿಯೇ ಅನಾವರಣಗೊಳಿಸಲು ಯತ್ನಿಸಿದ್ದಾರೆಂಬುದು ತಿಳಿಯುತ್ತದೆ. ಶೋಷಣೆಯ ವಿವಿಧ ರೂಪಗಳನ್ನು ಹೇಳಿದ್ದಾರೆ. ಸರಳೀಕೃತ ವಿಂಗಡಣೆ, ವಾಚ್ಯ ಮತ್ತು ಗೆರೆ ಕೊರೆದಂಥ ಕಪ್ಪು ಬಿಳುಪು ಚಿತ್ರಗಳಿಂದಾಗಿ ವರ್ಗ ಪ್ರಜ್ಞೆ ವಾಸ್ತವದಲ್ಲಿರುವಷ್ಟು ಸಂಕೀರ್ಣ ಆಯಾಮಗಳಲ್ಲಿ ಒಡಮೂಡದೇ ಕೃತಕಗೊಳ್ಳುತ್ತದೆ.

ಬಂಡವಾಳಗಾರ - ಕಾರ್ಮಿಕರ ಪ್ರಜ್ಞೆ, ಬಲಹೀನ-ಬಲವಂತ, ಬಡತನ-ಶ್ರೀಮಂತಿಕೆಗಳು, ಬಡತನದ ಸ್ವರೂಪ, ಅದರ ವರ್ಣನೆ, ಮಠಾಧಿಪತಿಗಳ ಕ್ರೌರ್ಯ, ಅಮಾನವೀಯತೆಗಳ ದಾಖಲು ನೋವುಂಡವರ ಪ್ರತಿಭಟನೆ ಎಲ್ಲವೂ ಈ ಕತೆಗಳಲ್ಲಿ ಬಂದಿವೆ. ಆರ್ಥಿಕ ಅಸಮಾನತೆಯೇ ಎಲ್ಲ ಶೋಷಣೆಗಳ ಮೂಲಕ ಎಂಬ ಧ್ವನಿ ಇಲ್ಲಿದೆ. ಇಷ್ಟವಸ್ತು, ವ್ಯಕ್ತಿಗಳನ್ನು ಹೊಂದಲು ತಡೆಯೊಡ್ಡುವ ಅಸಮಾನತೆಗೆ ಹೆಚ್ಚು ಒತ್ತು ಕೊಡಲಾಗಿದೆ. ವಾತ್ಸಲ್ಯ, ಪ್ರಿತಿಗಳೂ ಆರ್ಥಿಕ ಬಲವನ್ನು ಆಧರಿಸಿರುತ್ತವೆಂಬ ನಿಲವಿದೆ.

ಬದುಕಿಗೆ ಎದೆ ತೆರೆದು ಸ್ಪಂದಿಸಿದ ಚದುರಂಗರು ಮಾರ್ಕ್ಸ್‌ವಾದದಿಂದ ಆಕಷಿತರಾಗಿ ಪ್ರಗತಿಶೀಲ ಸಾಹಿತ್ಯ ಚಳುವಳಿಯ ಸಂದರ್ಭದಲ್ಲಿ ಗುರುತಿಸಿ ಕೊಳ್ಳಲ್ಪಟ್ಟವರು ಆ ಸಂದರ್ಭದಲ್ಲಿ ಬಡತನ ಹಸಿವು ಮತ್ತು ವರ್ಗ ತಾರತಮ್ಯಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಬರೆದು ಕತೆಗಳನ್ನು ಈ ಆಶಯದಡಿಯಲ್ಲಿ ವಿವೇಚಿಸಬಹುದಾಗಿದೆ.

ಚಿಕ್ಕ ಮಕ್ಕಳ ಮನಸ್ಸಿನ ಸೂಕ್ಷ್ಮ ಎಳೆಗಳನ್ನು ದೊಡ್ಡವರ ಮನಸ್ಸಿನ ಎಳೆಗಳಿಗೆ ಜೋಡಿಸುವುದರ ಮೂಲಕ ನಿಶ್ಚಿತಸತ್ಯವೊಂದನ್ನು ಹೇಳ ಹೊರಟ ಕತೆ 'ಬಣ್ಣದ ಬೊಂಬೆ'

ಶ್ರೀಮಂತ ಮನೆಯಲ್ಲಿ ಸಕಲಸವತ್ತುಗಳೊಂದಿಗೆ ಬೆಳೆಯುತ್ತಿರುವ ಹುಡುಗಿ ವನಜಾಕ್ಷಿ. ಅವರ ಮನೆಯ ಪಕ್ಕದ ಗುಡಿಸಲಿನಲ್ಲಿ ನಿರ್ಗತಿಕ ಬದುಕನ್ನು ಸವೆಸುತ್ತಿರುವವರ ಮಗಳು ಪುಟ್ಟರಂಗಿ. ತಂದೆತಾಯಿಗಳ ಕಟ್ಟುನಿಟ್ಟಿನ ಬೇಲಿಯೊಳಗೆ ಅಸಂತುಷ್ಟವಾಗಿ ಬೆಳೆಯುತ್ತಿದ್ದ ಆ ಶ್ರೀಮಂತರ ಹುಡುಗಿ, ಪುಟ್ಟ ರಂಗಿಯ ಸ್ನೇಹ ಮಾಡಿ ಜೊತೆಯಲ್ಲಿ ಕಲಿತು ಒಂದಷ್ಟು ಹೊತ್ತು ಆಟವಾಡಿ ಸಂತೋಷಪಡುವ ವೇಳೆಯೆಂದರೆ ವಾರದಲ್ಲೊಂದು ದಿನ ವನಜಾಕ್ಷಿಯ ತಾಯಿ 'ಲೇಡಿಸ್ ಕ್ಲಬ್' ಗೆ ಹೋಗಿದ್ದಾಗ ಮಾತ್ರ. ವನಜಾಕ್ಷಿ ತನ್ನ ಆಟಬೊಂಬೆಯನ್ನು ಪುಟ್ಟರಂಗಿಗೆ ಕೊಡುತ್ತಾಳೆ, ತನ್ನ ತಾಯಿಗೆ ತಿಳಿಯದಂತೆ ಆದರೆ ಪುಟ್ಟ ರಂಗಿಯ ತಾಯಿ ಶ್ರೀಮಂತರ ಮನೆಯ ಆಟಿಕೆಯನ್ನು ಕದ್ದು ಅಪಾಧದನೆ ತಮ್ಮ ಮೇಲೆ ಬರಬಾರದೆಂಬ ಕಾರಣದಿಂದ ವಾಪಸು ಕಳಿಸುತ್ತಾಳೆ. ತನ್ನ ಮಗಳಿಗೆ ಅಂಥ ಆಟಿಕೆಯನ್ನು ಕೊಂಡುಕೊಡುವ ಶಕ್ತಿಯೂ ಅವಳಿಗಿರುವುದಿಲ್ಲ.

ಈ ಕತೆಯ ಶೀರ್ಷಿಕೆ ನಾನಾ ಸ್ತರದಲ್ಲಿ ಅರ್ಥ ಹೊರಡಿಸುವ ಸಾಮರ್ಥ್ಯ ಹೊಂದಿದೆ. ವರ್ಗಗಳ ನಡುವಿರುವ ಅಂತರ ಮತ್ತು ಸಂಬಂಧ ಮಾತ್ರವಲ್ಲದೇ ತೀವ್ರ ಕಳಕಳಿಯ ಮಾನವೀಯ ಬದುಕನ್ನು ಬಡವರ್ಗ

ಬದುಕುತ್ತದೆಂದೂ ಶ್ರೀಮಂತಿಕೆಯ ವರ್ಗ ತಮ್ಮ ಹಿತಾಸಕ್ತಿಗಳಿಗನುಗುಣವಾಗಿ ಏನೂ ಮಾಡಲು ಹೇಸುವುದಿಲ್ಲವೆಂದೂ ಇದರಿಂದ ತಿಳಿಯುತ್ತದೆ. ಬಣ್ಣದ ಬೊಂಬೆ ಆಟದ ವಸ್ತುವಾಗಿ ಮಕ್ಕಳಿಬ್ಬರ ಸ್ನೇಹಕ್ಕೆ ಅವಕಾಶವಾದಂತೆಯೇ ಅವರ ಸ್ನೇಹಚ್ಯುತಿಗೂ ನಿಮಿತ್ತವಾಗುತ್ತದೆ.

ತನ್ನದೇ ಆದ ಬಣ್ಣದ ಬೊಬೆ ಹೊಂದಲು ಪುಟ್ಟರಂಗಿಗೆ ಸಾಧ್ಯವಾಗದು ಇದು ಅವರಪ್ಪನ ಮಾತನ್ನು ಹುಡುಗಿ ಪುನರುಚ್ಚರಿಸುವುದರಿಂದ ತಿಳಿದು ಬರುತ್ತದೆ. ಪುಟ್ಟರಂಗಿಯ ತಾಯಿಯ ವರ್ತನೆ ವಿಚಿತ್ರವೆನಿಸಿದರೂ ಅವರ ಬದುಕಿನ ರೀತಿಗೆ ಅದು ಸಹಜವಾದುದ್ದು. ಮತ್ತೊಬ್ಬರ ಹಂಗು ನಮಗೇಕೆಂಬ ದಾರ್ಷ್ಟ್ಯ ಸ್ವಾಭಿಮಾನಕ್ಕಿಂತ ಇಲ್ಲಿ ಮುಖ್ಯವೆನಿಸುವುದು, ಕಳ್ಳತನದ ಅಪಾದನೆಯ ಭಯ.

ಉಳ್ಳ ಮತ್ತು ಉಳ್ಳದ - ಎರಡು ವರ್ಗಗಳ ನಡುವಿನ ಕಂದರಗಳನ್ನು ಮಕ್ಕಳ ಮುಗ್ಧ ಮನಸ್ಸುಗಳ ಕ್ರಿಯಾಚರಣೆ ಮೂಲಕವೂ ಹೇಗೆ ಕಾಣಿಸಿಕೊಡಬಹುದೆಂಬುದಕ್ಕೆ ಈ ಕತೆ ಸಾಕ್ಷಿ. ಸರಳತೆಯೇ ಈ ಕತೆಯ ಲಕ್ಷಣ. ಕತೆಯ ವಿನ್ಯಾಸ ಒಂದು ಪೂರ್ಣಾನುಭವದ ಮೇಲೆ ಕಟ್ಟಲ್ಪಟ್ಟಿದೆ.

'ತು ಚೀಪ್ ತು ದಾಂಡ್ ತು ಬದ್ ರೇಡೀ' ಕತೆಯು ಚಿಕ್ಕದಾಗಿದ್ದರೂ ಆಲೋಚಿಸುವಂತಿದೆ. ಮಕ್ಕಳ ಮನೋಭಾವವು ಆಟದ ಕಡೆಗೆ ಹೇಗೆ ವಶೀಕರಣ ಕೊಂಡಿರುತ್ತದೆಂಬುದನ್ನು ತಿಳಿಸುತ್ತಲೇ ಬಡತನ ಮತ್ತು ಹೆತ್ತವರ ಮನಸ್ಸುಗಳು ಮಕ್ಕಳ ಮನೋಭಾವವನ್ನು ಗುರ್ತಿಸುವಲ್ಲಿ ಹೇಗೆ ದಾರಿ ತಪ್ಪುತ್ತದೆಂಬುದರ ಚಿತ್ರಣವಿದೆ. ಚಿನ್ನಿಯಾಟವೆಂದರೆ ಪ್ರಾಣ ಬಿಡುವ ಕರೀಮನು ಬಡತನದ ಕಾರಣವಾಗಿ ಶಾಲೆಯನ್ನು ಮುಂದುವರಿಸಲಾಗದೆ, ಅಪ್ಪ ನಡೆಸುವ ಬೀಡಿ ಕಾರ್ಖಾನೆಗೆ ದುಡಿಯಲು ಹೋಗಬೇಕಾದ ಅನಿವಾರ್ಯತೆ ಎದುರಿಸುತ್ತಾನೆ. ಸಹಪಾಠಿಯಾಗಿದ್ದವನ ಜೊತೆ ಕರೀಮನು ನಡೆಸುವ ಸಂಭಾಷಣೆಯ ಮೂಲಕ ಇದು ಅರಿವಾಗುತ್ತದೆ.

ಕಾರ್ಖಾನೆಗೆ ಹೋಗಲು ತಡವಾಗಿದೆಯೆಂಬ ಅರಿವು ಕರೀಮನಿಗಾದರೂ ಕಾರ್ಖಾನೆಯ ಎದುರು ಹುಡುಗರು ಆಡುತ್ತಿದ್ದ ಚಿನ್ನಿಯಾಟದ ಮೇಲೆಯೇ ಅವನ ಮನಸ್ಸು ನಿಲ್ಲುತ್ತದೆ. ಮಾತ್ರವಲ್ಲ, ಸಮಯಾನುಸಾರ ಎದುರಾದ ಪಂಥದಲ್ಲಿ ಬಿರುಸಾಗಿ ಚಿನ್ನಿ ಹಾರಿಸುವುದರ ಮೂಲಕ ಆತ ಆಟದಲ್ಲಿ ಭಾಗಿಯಾಗುತ್ತಾನೆ. ಅಷ್ಟರಲ್ಲಿ ಅಲ್ಲಿಗೆ ಬಂದ ಅವನ ತಂದೆ ಕ್ರುದ್ಧನಾಗಿ ನಾಲ್ಕೇಟು ಬಾರಿಸುತ್ತಾನೆ.

ಆಟಪಾಠಗಳ ವಯಸ್ಸಿನಲ್ಲಿ ದುಡಿಯಲು ಒತ್ತಾಯಿಸಿ, ದಂಡಿಸುವ ಈ ಪರಿಯನ್ನು ಲೇಖಕರು ವಿಷಾದದಿಂದ ದಾಖಲಿಸುತ್ತಾರೆ. ಬಾಲಕಾರ್ಮಿಕ ಸಮಸ್ಯೆ ಸಾನುಕಂಪ ನೆಲೆಯಲ್ಲೇ ನಿಂತಿದೆ.

'ಇಣುಕುನೋಟ' ಕತೆಯು ಒಂದು ಸಾಮಾಜಿಕ ವಿಮರ್ಶೆ ಮತ್ತು ದುರಂತ ವ್ಯಂಗ್ಯವಾಗಿ ಒಳ್ಳೆಯ ಪರಿಣಾಮ ಬೀರುತ್ತದೆ. ಸಮಾಜ ವ್ಯಕ್ತಿಯನ್ನು ಹಾಳು ಮಾಡುವಲ್ಲಿ ವಹಿಸುವ ಪಾತ್ರ ಎಂದಹುದೆಂಬುದನ್ನು ಇಲ್ಲಿ ಸೊಗಸಾಗಿ ಹೇಳಲಾಗಿದೆ.

ಸಭ್ಯ ಸಂಭಾವಿತನಾದ ಧೀರ ಎಂಬ ರೈತನು ನ್ಯಾಯಾಲಯವನ್ನು ನೋಡುವ ಕೌತುಕವೇ ಕಾರಣವಾಗಿ ಆತ ಕೆಲವು ಅ-ಸಂಬಂಧ ಘಟನೆಗಳಿಂದ ಶಾಶ್ವತ ಅಪರಾಧಿಯಾಗುತ್ತಾನೆ. ಧೀರನ ತಾಯಿಯಾದವಳ 'ಕೋರ್ಟನ್ನು ನೋಡಬೇಡ, ಕೇಡಾಗುತ್ತದೆ. ಎಂಬ ಹಿತನುಡಿ ಅವನ ಬಾಳಿನಲ್ಲಿ ಸತ್ಯವಾಗುತ್ತದೆ. ಗೆಳೆಯ ಕುಳ್ಳಸಿದ್ಧನ ಪ್ರೋತ್ಸಾಹದ ಮೇರೆಗೆ ಧೀರನು ಕೋರ್ಟು ನೋಡಲು ಬಂದವನು ತನ್ನ ಸಹಜ ವೇಷಭೂಷಣಗಳಿಂದಲೇ ಪೋಲಿಸನ ಕಾಕದೃಷ್ಟಿಗೆ ಬೀಳುತ್ತಾನೆ. ಕಳ್ಳನೆಂಬ ಅನುಮಾನದಿಂದ ಧೀರನನ್ನು ಲಾಕಪ್‌ಗೆ ತಳ್ಳುತ್ತಾನೆ. ಬಹುಶಃ ಇದೇ ಧೀರನಂಥ ವಿಪರ್ಯಾಸ, ದಾರುಣತೆಯಿಂದ ಕೂಡಿರುತ್ತದೆಂದರೆ ಸರಗಳ್ಳನೊಬ್ಬ ಧೀರನ ಮುಂದೆ ಎಸೆದು ಹೋದದ್ದೇ ಕಾರಣವಾಗಿ ನಿರಪರಾದಿಯಾದ ಧೀರ ಸರಗಳ್ಳತನದ ಅಪರಾಧವನ್ನು ಹೊತ್ತು ಮತ್ತೆ ಜೈಲು ಸೇರುತ್ತಾನೆ. ಅವನ ಹಳ್ಳಿ, ಹೆಂಡತಿ ಯಾರೂ ಧೀರನ ಸಮೀಪ ಬರುವುದಿಲ್ಲ. ನಿಜವಾದ ಅಪರಾಧಿಯಂತೆಯೇ ತನ್ನನ್ನು ಹಳ್ಳಿ ನೋಡುವುದರ ಕುರಿತು ಅವನು ಹತಾಶನಾಗುತ್ತಾನೆ. ಇಷ್ಟೇ ಆಗಿದ್ದರೂ ಧೀರನ ಬಾಳು ಹೇಗೋ ಹೊಂದಿಕೊಂಡು ಹೋಗುತ್ತಿತ್ತು. ಆದರೆ ಅವನ ಪಕ್ಕದ ಹೊಲದ ಮೋಟ ಧೀರನ ಜಾಗವನ್ನು ಒತ್ತುವರಿ ಮಾಡಿಕೊಳ್ಳುವುದು, ಇದೇ ಕಾರಣವಾಗಿ ಧೀರ ಮೋಟನ ಹುಲ್ಲುಮೆದೆಗೆ ಬೆಂಕಿಯಿಟ್ಟು ಅಪಾದನೆಯಿಂದ ಪುನಃ ಜೈಲು ಸೇರುವುದು ನಡೆಯುತ್ತದೆ. ಅವನು ಪುನಃ ಜೈಲಿನಿಂದ ಬಂದ ನಂತರ ನಡೆಯುವ ಮೋಟ ಮತ್ತು ಧೀರನ ಹೆಂಡತಿಯ ಸರಸವನ್ನು ಕಂಡು ಅವರನ್ನು ಕೊಲೆ ಮಾಡಲು ಹೊರಡುವುದು - ಇದರಿಂದ ಮತ್ತೆ ಜೈಲು ಸೇರುವುದು... ಹೀಗೆ ಧೀರನು ಹಂತ ಹಂತವಾಗಿ ಸಮಾಜದ ತಪ್ಪು ವ್ಯಾಖ್ಯಾನದಿಂದ, ಒಳ್ಳೆಯತನದಿಂದ ಬಲವಂತವಾಗಿ ಕೆಟ್ಟತನಕ್ಕೆ ಸಾಗುವ ಅವರೋಹಣ ಕ್ರಮ... ಕತೆಯುದ್ದಕ್ಕೂ ಬರುವ ಸಿನಿಮೀಯ ಮತ್ತು ನಾಟಕೀಯ ಶೈಲಿ, ತಿರುವುಗಳು ಲೇಖಕರ ಆಶಯವನ್ನು ತಿಳಿಸುವಲ್ಲಿ ತೆಳು ಮಾಡಿದೆ ಎಂದೆನಿಸುತ್ತದೆ. ಧೀರ ಎಂಬ ಹೆಸರೇ ಪಾತ್ರವು ಪಡೆಯುವ ಏನೆಲ್ಲ ತೀಕ್ಷ್ಣ ಬದಲಾವಣೆಗಳನ್ನು ವಿಡಂಬಿಸುವಂತಿದೆ. ಹಳ್ಳಿಯು ನಗರದೆದುರು ಅಪಾರ್ಥಕ್ಕೀಡಾಗುವ, ಒಟ್ಟೂ ಇಂಡಿಯಾದ ದುರಂತದ ಸಂಕೇತದ ಸಂಕೇತವಿದು. ಒಬ್ಬ ಒಳ್ಳೆಯ ವ್ಯಕ್ತಿ ಯಾವುದೇ ಅಪರಾಧಗಳನ್ನು ಮಾಡದಿದ್ದರೂ ಸಮಾಜದ ಕಪಟ, ಕುಟಿಲ ವ್ಯವಸ್ಥಿತ ಪಿತೂರಿ, ನಿರ್ಲಕ್ಷ್ಯಗಳಿಂದ ಕೆಟ್ಟವನಾಗಿ ಪರಿಣಮಿಸುತ್ತಾನ. ಒಬ್ಬ ಮುಗ್ಧನ ವ್ಯಕ್ತಿತ್ವ ನಾಶವಾಗುವ ಪ್ರಕ್ರಿಯೆ ಕತೆಯುದ್ದಕ್ಕೂ ಕಾಣುತ್ತದೆ.

ನಗರ ಮತ್ತು ಹಳ್ಳಿ ಹಾಗೂ ಹಳ್ಳಿ ಮತ್ತು ಹಳ್ಳಿಗಳ ನಡುವಣ ವೈದೃಶ್ಯಗಳಲ್ಲಿ ಸನ್ನಿವೇಶ ಮುಖಾಮುಖಿಯಾಗಿದೆ. ಕತೆಯ ಪ್ರಾರಂಭವು ಹಳ್ಳಿಯನ್ನು ಅಪಾರ್ಥವಾಗಿ ಕಾಣುವ ನಗರ ಮತ್ತು ಕತೆಯ ಕೊನೆಯಲ್ಲಿ ಹಳ್ಳಿಯು ಹಳ್ಳಿಯನ್ನೇ ಅಪಾರ್ಥವಾಗಿ ಕಾಣುವ ವಿಪರ್ಯಾಸ -ಇವು ಪಾತ್ರ ಮತ್ತು ಘಟನೆಗಳಲ್ಲಿ ವ್ಯಕ್ತವಾಗುತ್ತದೆ.

'ಮರಳಿ ಅಲ್ಲಿಗೆ' ಕತೆಯನ್ನು ಈಗ ನೋಡಬಹುದು. 'ಈ ಕತೆಯನ್ನು ಪ್ರಗತಿಶೀಲ ಪಂಥದ ಉತ್ತಮ ಪ್ರಾತಿನಿಧಿಕ ಕಥೆಯೆಂದು ಹೊಗಳುವ ಶೇಷಗಿರಿರಾಯರು ಮುಂದುವರೆದು ಪ್ರಗತಿಶೀಲ ಸಾಹಿತ್ಯದೊಂದಿಗೆ ನಮ್ಮ

ಮನಸ್ಸು ಜೋಡಿಸುವ ಹಸಿ ಬರಹ, ಆವೇಶಗಳಿಲ್ಲದ, ಅತೀ ಭಾವುಕತೆಯಿಲ್ಲದ, ಆದರೆ ಪ್ರಗತಿಶೀಲ ಪಂಥದ ಉದ್ದೇಶವನ್ನು ಕಲಾತ್ಮಕವಾಗಿ ಸಾಧಿಸುವ ಕಥೆ. ಕತ್ತಲಾದ ಕಡೆ ತನ್ನ ಕೈಚಳಕದಿಂದ ಬೆಳಕು ತರಿಸುವವನ ಬದುಕೇ ಕತ್ತಲೆಯಲ್ಲಿ ಮುಳುಗಿರುವ 'ಐರನಿ'ಯನ್ನು ಗಮನಿಸಬೇಕು.

ಜೀವನ ನಿರ್ವಹಣೆಗಾಗಿ ಅಪಾಯಕಾರಿ ಕೆಲಸಗಳನ್ನು ಅನಿವಾರ್ಯತೆಯ ಕಾರಣಕ್ಕಾಗಿ ಮಾಡಬೇಕಾದ ಮಂಚಣ್ಣ ವಿದ್ಯುಚ್ಛಕ್ತಿ ಇಲಾಖೆಯಲ್ಲಿ ಟೆಂಪರರಿ ಉದ್ಯೋಗಿ. ಅವನ ಮನದ ತುಯ್ತಗಳು ಈ ಹಿಂದೆ ಎಷ್ಟೋ ಬಾರಿ ನಡೆದಿದ್ದರು ಬಷೀರನ ಸಾವಿನಿಂದ ಮತ್ತಷ್ಟು ವ್ಯಾಪಕವಾಗುತ್ತದೆ. ಬಷೀರನು ರಿಪೇರಿಗಾಗಿ ಹೋದವನು ವಿದ್ಯುತ್ ಅಘಾತದಿಂದ ಸಾವನ್ನಪ್ಪಿರುತ್ತಾನೆ.

ಈ ಸಾವುನೋವಿನ ಕೆಲಸವನ್ನು ಬಿಡುವುದು ಸೂಕ್ತವೆಂಬ ತೀರ್ಮಾನವನ್ನು ಆತ ತೆಗೆದುಕೊಡರೂ ಮನೆಯಲ್ಲಿರುವ ಮಕ್ಕಳ, ಮದುವೆಗಾಗಿ ಮಾಡಿದ ಸಾಲ... ಹೆಂಡತಿಯ ಚಿತ್ರಗಳು ಕಣ್ಣ ಮುಂದೆ ಹಾಯ್ದು ಬೇರೊಂದು ಕೆಲಸ ಸಿಗುವುದೆಂಬ ಗ್ಯಾರಂಟಿಯಿಲ್ಲದೆ ಅವನು ಯೋಚಿಸುವಂತಾಗುತ್ತದೆ. ಲೈನ್‌ಮ್ಯಾನ್ ಮಂಚಣ್ಣನ ಬದುಕಿನ ಆತಂತ್ರಗಳು ಕತೆಯಲ್ಲಿ ಸ್ಥಾನ ಪಡೆದು ಆ ಮೂಲಕ ಬಡತನ ಹಾಗೂ ವರ್ಗವೈರುದ್ಧಗಳ ಅಂಶವನ್ನು ಕಾಣಿಸಿಕೊಡುತ್ತದಾದರೂ ಅದಕ್ಕೆ ಕಾರಣವಾದ ಸಾಮಾಜಿಕ, ಆರ್ಥಿಕ ನೆಲೆಗಳನ್ನು ಶೋಧಿಸುವುದಿಲ್ಲ. ಅದು ಲೇಖಕರ ಉದ್ದೇಶವೂ ಆಗಿರುವುದಿಲ್ಲ.

'ಮರಳಿ ಅಲ್ಲಿಗೇ' ಎಂಬುದು ಈ ರೀತಿಯ ಅಪಾಯದಿಂದ ವಿಮುಖವಾಗಬೇಕಾದ, ಆಗಲೇಬೇಕಾದ ಬದುಕೊಂದು ಪರಿಸ್ಥಿತಿಯ ಒತ್ತಡದಿಂದ ಪುನಃ ಮೊದಲ ಸ್ಥಿತಿಗೇ ಹಿಂದಿರುಗುವುದನ್ನು ಕಟ್ಟಿಕೊಡುತ್ತದೆ. ಲೇಖಕರ ಅನುಕಂಪ ಸಹಿತ ದೃಷ್ಟಿ ಬಡತನದ ಕುಟುಂಬ ಮತ್ತು ಅದಕ್ಕೆ ಕಾರಣವಾದ ಸಾಮಾಜಿಕ ಸಂದರ್ಭವನ್ನು ನೋಡುವಷ್ಟಕ್ಕೇ ಸೀಮಿತವಾಗಿದೆ.

ಕತೆಯಲ್ಲಿ ಕತ್ತಲು -ಬೆಳಕುಗಳನ್ನು, ಅವುಗಳ ಒಡನಾಟ ಚೆಲ್ಲಾಟಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಂಡಿದೆ. ದೀಪ ಉರಿಯುವ ಕಚೇರಿಯಿಂದ ಕತ್ತಲಿನ ರಸ್ತೆಗೆ, ರಸ್ತೆಯಲ್ಲಿ ಎರಡು ಬದಿಗೆ ದೀಪಗಳು, ಉರಿಯುವ ಸೈಕಲಿನ ದೀಪವೂ ಆಗಿ ಕತ್ತಲು, ಮಂಚನ ಜಾಣ್ಮೆಯಿಂದ ದೀಪಗಳು ಹೊತ್ತಿಕೊಂಡು ಕತ್ತಲೆ ಹೋಗುತ್ತದೆ. ಅವನ ಮನೆಯಲ್ಲಿ ದೀಪ ಆಗಿಹೋಗುತ್ತದೆ. ಈ ಬೆಳಕು -ಕತ್ತಲುಗಳ ಆಟದ ನಡುವೆ ಮೃತ್ಯು ಕಾಣಿಸಿಕೊಳ್ಳುತ್ತದೆ. ಕತೆ ಮೂಡಿಸುವ ಪರಿಣಾಮಕ್ಕೆ ಕ್ರಿಯೆಯೆ ಸುತ್ತ ಅದು ಸೃಷ್ಟಿಸುವ ಆವರಣವೂ ಕಾರಣ.

'ಎರಡು ಕಂಠ -ಒಂದು ರಾಗ' ಕತೆಯು ತನ್ನ ರಚನೆ ಮತ್ತು ಆಶಯದ ಅಸಂಬಂಧ್ಧ, ತರ್ಕರಹಿತ ಲಕ್ಷಣಗಳಿಂದ ಕೂಡಿದ್ದು, ದೋಷಪೂರ್ಣವಾಗಿದೆ.

ಕುರುಡಿಯಾದ ತಾಯಿಗೆ ಕುಂಟನಾದ ಮಗ ಚೆನ್ನ. ಸನ್ಯಾಸಿಯೊಬ್ಬನ ಸಂಪರ್ಕದಿಂದ ಭಿಕ್ಷುಕ ಪರಂಪರೆಯಲ್ಲಿ ಜನಿಸಿದ ಕುರುಡಿಗೆ ಈ ಹೆಳವನಾದ ಚೆನ್ನ ಹುಟ್ಟಿರುತ್ತಾನೆ. ಚೆನ್ನ ತಾಯಿಯ ಕಣ್ಣಾಗಿ, ತಾಯಿ ಮಗನ ಕಾಲಾಗಿ ಜೀವನ ಸಾಗಿಸುತ್ತಿರುತ್ತಾರೆ. ಆದರೆ ಕತೆ ಒತ್ತು ಕೊಡುವುದು ಎಲ್ಲೆಂದರೆ, ಇವರಿಬ್ಬರು ಆಸ್ವಾದಿಸಬೇಕೆಂದು ಹೇಳಲಾಗುವ ಪ್ರಕೃತಿ ಸೌಂದರ್ಯದ ಬಗ್ಗೆ.

ಕತೆಯ ಪ್ರಾರಂಭದಲ್ಲಿ ಬರುವ ಕಾಮನ ಬಿಲ್ಲಿನ ವಿಷಯ ಮತ್ತು ತಾಯಿ ಮಗನ ಸಂಭಾಷಣ, ಅವರಿಬ್ಬರ ದೈಹಿಕ ಅಸ್ವಸ್ಥತೆಯನ್ನು ಓದುಗರಿಗೆ ಮುಟ್ಟಿಸುವ ನಿರೂಪಣಾ ತಂತ್ರವಾಗಿ ಬಂದಿದೆ ಎಂದಿಟ್ಟುಕೊಂಡು ಮುಂದೆ ಹೋದರೆ ಕತೆ ಕೊನೆಯಾಗುವುದು, ಮಗನಿಲ್ಲದೆ ತಾಯಿ ಪ್ರಕೃತಿ ಸೌಂದರ್ಯಾಸ್ವಾದನೆ ಮಾಡಲಾಗದ ಸ್ಥಿತಿಗೆ ಬಂದಿದ್ದಾಳೆಂಬ ವಿಚಾರದಿಂದ. ಹೀಗಾಗಿ ಯಾವುದನ್ನು ನಿರೂಪಣಾ ತಂತ್ರ ಎಂದು ಕೊಂಡಿರುತ್ತೇವೆಯೋ ಅದೇ ಕಥಾವಸ್ತುವಾಗಿ, ಕತೆಯ ಕೇಂದ್ರ ಬಿಂದುವಾಗಿ ಕತೆಯ ಕೃತಿಮತೆಗೆ ಕಾರಣವಾಗಿ ಬಿಡುತ್ತದೆ. ಹಸಿದವರಿಗೆ ಬೇಕಾದದ್ದು ಅನ್ನ, ಎಂಬ ವಾಸ್ತವ ವಿಚಾರ ಲೇಖಕರಿಗೆ ಕಾಡುವುದೇ ಇಲ್ಲ. ಅನ್ನಕ್ಕಾಗಿ ಅಷ್ಟೊಂದು ಕಷ್ಟಪಡುವ ಅಂಶ ಕತೆಯೊಳಗೆ ಉಲ್ಲೇಖಿತವಾಗಿದ್ದರೂ ಕತೆ ಅದನ್ನು ಗೌಣವಾಗಿಟ್ಟು ಅನ್ನಕ್ಕೆ ಹೇಗೋ ದಾರಿಯಾಗುತ್ತದೆ. ಆದರೆ ಪ್ರಕೃತಿ ಸಂಭ್ರಮಗಳನ್ನು ನೋಡುವ ಭಾಗವಿಲ್ಲದಿದ್ದರೂ ಕೇಳುವ ಭಾಗ್ಯವನ್ನು (ಮಗನಿಂದ) ಕಳೆಕೊಂಡನಲ್ಲ ಎಂಬ ಹಳಹಳಿಕೆಯನ್ನು ಮುಖ್ಯವಾಗಿ ತರುತ್ತದೆ. ಮಗ ದಿನದಿಂದ ದಿನಕ್ಕೆ ಬೆಳೆಯುತ್ತಿದ್ದವನು ದೈಹಿಕ ಭಾಗದಿಂದ ಎತ್ತಲಾರದವನಾದನೋ ಅಥವಾ ತಾಯಿಯೇ ತನ್ನ ನಿತ್ರಾಣ, ನಿಶ್ಯಕ್ತಿಯ ಕಾರಣದಿಂದ ಎತ್ತಲಾರದವಳಾದಳೋ ಅಂತೂ ಚೆನ್ನನನ್ನು ಬಿಟ್ಟು ಕುರುಡಿ ತಾಯಿ ಭಿಕ್ಷೆಗೆ ಹೊರಡುತ್ತಾಳೆ.

ದೀನರ ಚಿತ್ರಣವಿದ್ದರೂ ಲೇಖಕರ ಆಶಯ ಮಾತ್ರ ಅಸಂಗತವಾಗಿದೆ. "ಎರಡೇ ಪಾತ್ರಗಳಿರುವ ಈ ಕತೆ ಸನ್ನಿವೇಶ ಸೃಷ್ಟಿ ಹಾಗೂ ಯುಕ್ತ ವರ್ಣನೆಗಳೊಂದಿಗೆ ಕನ್ನಡ ಉತ್ತಮಶ್ರೇಣಿಯ ಕಥೆಗಳಲ್ಲಿ ಒಂದಾಗಿದೆ"೭ ಎಂಬ ಅಭಿಪ್ರಾಯ ಅರ್ಥಹೀನವಾದುದು.

'ಮೂರು -ಮತ್ತೊಂದು' ಮುಖ್ಯಾವಾಗಿ ಒಂದು ರೂಪಕ. ಸಮಾಜದ ಅಸಮಾನತೆ, ಬಡವ-ಶ್ರೀಮಂತ ಎಂಬ ವರ್ಗಗಳ ನಡುವಿರುವ ವೈಷಮ್ಯ, ವೈರುಧ್ಯ ಎಲ್ಲಕ್ಕಿಂತ ಹೆಚ್ಚಾಗಿ ಬಡತನದಿಂದ ತೀವ್ರವಾದ ಹಸಿರುವು - ಇವುಗಳನ್ನು ವಿವಿಧ ವರ್ಗಗಳ ವಾರಸುದಾರರಿಗೆ ಸೇರಿದ ಮೂರು ನಾಯಿಗಳ ಸಂಭಾಷಣಾ ತಂತ್ರದಲ್ಲಿ ಲೇಖಕರು ತಿಳಿಸಲು ಹೊರಡುತ್ತಾರೆ.

ಮಾಂಸದ ತುಂಡಿಗಾಗಿ ಕಚ್ಚಾಡುವ ಮೂರು ನಾಯಿಗಲು ಪರಸ್ಪರ ತಮ್ಮನ್ನೂ ತಮ್ಮ ಒಡೆಯರನ್ನೂ ಹೊಗಳುತ್ತಾ, ದೂಷಿಸುತ್ತ ತಿನ್ನಲು ಕಾತರಗೊಂಡು ಕಚ್ಚಾಡುತ್ತಿರುವಾಗ ಶ್ರೀಮಂತ ಪಂಗಡದವರೊಬ್ಬರ ಸುಂದರವಾದ ಜೊಲುನಾಯಿಯೊಂದು ಕೊನೆಗೆ ಎಲ್ಲವನ್ನೂ ಬಾಯಿ ಮುಚ್ಚಿಸಿ ಮಾಸದ ತುಂಡನ್ನು ತಿನ್ನುತ್ತದೆ.

"ಶ್ರೀಮಂತ ನಾಯಿಗಳು ಬಡನಾಯಿಯನ್ನು ಆಕ್ರಮಿಸಿ ಮಾಂಸದ ತುಂಡನ್ನು ಕದಳಿಸುವುದರಲ್ಲಿ ಶ್ರೀಮಂತರ ಬಡವರನ್ನು ಶೋಷಿಸುವ ಚಿತ್ರ ಪ್ರತಿಮಾರೂಪದಲ್ಲಿದೆ."೮

ವಿಡಂಬನೆ ಈ ಕತೆಯ ಮುಖ್ಯ ಅಂಶ ಎಂದುಕೊಂಡರೂ ಅದು ತೀವ್ರವಾಗದೆ ಮಂದಸ್ತರಲ್ಲೇ ನಿಲ್ಲುತ್ತದೆ. ಸಮಾಜಚಿತ್ರಣ ಕೂಡ ಆಂಶಿಕವಾಗಿ ಬಂದು ಆ ಉದ್ದೇಶವೂ ಅಪೂರ್ಣವಾಗುತ್ತದೆ. ಸಮಾಜದ ಅಸಮಾನತೆ ಅದರಲ್ಲೂ ವರ್ಗ ಅಸಮಾನತೆ ಕತೆಯಲ್ಲಿ ಸ್ಥಾನ ಪಡೆದು ಚಿತ್ರಣಗೊಳ್ಳುತ್ತ ಹೋಗುವುದು ಅವರ ಉದ್ದೇಶವಾಗಿದ್ದು, ಎಲ್ಲಕ್ಕಿಂತ ಹೆಚ್ಚಾಗಿ ಹಾಸ್ಯಾಸ್ಪದವೆನಿಸುವ ಬಂಧವೇ ಈ ಕತೆಯ ದೋಷವೆನಿಸುತ್ತದೆ.

'ಗುಲಾಬಿ' ಕತೆಯ ಮುಖ್ಯವಸ್ತು ಬಡವ, ಶ್ರೀಮಂತರ ನಡುವಿನ ತಾರತಮ್ಯ. ವೈಭವದ ಆಡಂಬರದ ಜೀವನ ನಡೆಸುವ ಹೆಣ್ಣೊಂದು ಗುಲಾಬಿಯನ್ನು ಕಿತ್ತು ಮುಡಿದುಕೊಳ್ಳುವುದು, ಅದರ ಸೌಂದರ್ಯವನ್ನು ಮೆಚ್ಚಿ ಅಲ್ಲ, ತನ್ನ ಗೆಳತಿಯರು ಈ ಹೂವನ್ನು ಮುಡಿದ ತನ್ನನ್ನು ನೋಡಿ ಅಸೂಯೆಪಡಲೆಂದು.

ತೋಟಕ್ಕೆ ನೀರು ಹಾಕುವ ಕೆಲಸದಾಕೆ ಬಡ ಹೆಂಗಸು ಗುಲಾಬಿಯನ್ನು ಕಿತ್ತುವುದು ಅದರ ಸೌಂದರ್ಯ ಕಂಡು ಅಲ್ಲ; ದೇವರ ಮುಡಿಗೇರಿಸಲು. ಆದರೆ ಗುಲಾಬಿಗೆ ಬೇಕಿರುವುದು ಬೇರಾವ ಅನ್ಯ ಕಾರಣಗಳ ಹಿನ್ನೆಲೆಯೂ ಇಲ್ಲದೇ ತನ್ನ ಸೌಂದರ್ಯವನ್ನು ಪ್ರೀತಿಸುವ ನಿಷ್ಕಳಂಕ ಮನಸ್ಸಿನ ಮೆಚ್ಚುಗೆಗಾಗಿ. ಗುಲಾಬಿ ಇಲ್ಲಿ ನಿರೂಪಣೆ ಮಾಡುತ್ತದೆ.

'ಮನೆಯೊಡನೆಯ ಕುಡಿದ ಮತ್ತಿನಲ್ಲಿ ತುರುಬಿನಲ್ಲಿದ್ದ ಹೂವನ್ನು ಕಿತ್ತು ಕಾಲಿನಲ್ಲಿ ಹೊಸಕುವುದೂ ಮಾಲೆಯ ಮೇಲೆ ಕಳ್ಳತನದ ಆರೋಪ ಹೊರಿಸಿ ಕೆಲಸದಿಂದ ತೆಗುದು ಹಾಕುವುದೂ ಇವೆಲ್ಲ ಕತೆಯಲ್ಲಿ ಬರುತ್ತದೆ.

ವಾಸ್ತವವಾಗಿ ಗುಲಾಬಿ ಎಂಬುದು ಸೌಂದರ್ಯದ ಸಂಕೇತವಾಗಿ, ತೋಟದ ಮಾಲಿ ಮತ್ತು ಮನೆಯೊಡತಿ - ಇಬ್ಬರೂ ಬಡತನ, ಸಿರಿತನ ವರ್ಗಗಳ ಸಂಕೇತವಾಗುತ್ತಾರೆ. ತನ್ನೆಲ್ಲ ಸೌಂದರ್ಯ, ಇಂಪುಕಂಪುಗಳು ಕಪಟ ಮತ್ತು ಕೃತಕ ಜೀವನ ನಡೆಸುವ ಶ್ರೀಮಂತರಿಗಷ್ಟೇ ಮೀಸಲಾದವಲ್ಲ ಎಂಬ ವಿಷಾದ, ರೊಚ್ಚು ಗುಲಾಬಿಗಿದೆ.

ಚದುರಂಗರು ಪ್ರಗತಿಶೀಲ ಚಳವಳಿಯ ಅರೆಪ್ರಭಾವದಲ್ಲಿದ್ದ ಒಂದು ಕಾಲದಲ್ಲಿ ಬರೆದಿರಬಹುದಾದ ವರ್ಗಪ್ರಜ್ಞೆಯ ಕತೆಗಳಿವು. ಶೋಷಕ-ಶೋಷಿತ ಎಂಬ ಬಲವಂತದ ವರ್ಗೀಕರಣಗಳು ಕೃತಕವಾಗುವ ಅಪಾಯಗಳೆಲ್ಲವೂ ಇಂಥಲ್ಲಿ ತಲೆದೋರುತ್ತವೆಂಬುದು ಗಮನೀಯ. ವೈದೃಶ್ಯ ನಿರ್ಮಾಣಗಳೇ ಕತೆಯನ್ನು ನಡೆಸುತ್ತವೆ. ಬಡತನದ ನಾನಾ ಮುಖಗಳ ಚಿತ್ರದ ಜೊತೆಗೆ ಅದು ಕಿತ್ತುಕೊಳ್ಳುವ ಸುಖಗಳನ್ನು ಕೆಲವು ಕತೆಗಳು ತೆರೆದಿಡುತ್ತವೆ. ಚದುರಂಗರು ಯಾವುದೇ ಆಕ್ರೋಶ, ಅಬ್ಬರಗಳಿಲ್ಲದೇ ಬಡತನದ ಬಗ್ಗೆ ಬರೆದಿರುವುದು ತಟ್ಟನೆ ಗೋಚರಿಸುತ್ತದೆ. ಕಾರಣ ಅವರು ಬದುಕನ್ನು ನೋಡುವ ವ್ಯವಧಾನದಲ್ಲಿದೆ.

ಪ್ರಗತಿಶೀಲ ಕತೆಗಾರರಲ್ಲಿ ವರ್ಗಸಂಗರ್ಷದ ನೆಲೆಗಳು ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಕಾಣಿಸಿಕೊಂಡಿವೆ. ಈ ಆಶಯಗಳನ್ನು ತಮ್ಮ ಕತೆಗಳಲ್ಲಿ ನಿರ್ವಹಿಸಿರುವ ಬಗ್ಗೆ ಹೇಗೆ ಇರಲಿ, ಆ ಮೂಲಕ ಅವರು ಹೇಳಬೇಕೆಂದಿದ್ದ ಒಳಗಿನದನಿ ಮಾತ್ರ ತುಂಬಾ ಕರಾರು ವಕ್ಕಾಗಿವೆ. ನಿರಂಜನರು ಕಟ್ಟೀಮನಿಯಂತೆಯೇ ವರ್ಗನೆಲೆಯ ಹಲವು ಕೆತೆಗಳನ್ನು ವಸ್ತುವನ್ನಾಗಿ ಮಾಡಿಕೊಂಡಿದ್ದಾರೆ.

'ನೀವಮಾ ನೀವಮಾ' ಕತೆಯು ಮೇಲ್ವರ್ಗ ಮತ್ತು ಕೆಳವರ್ಗಗಳೆಂಬ ಸರಳ ವಿಂಗಡಣೆಯಲ್ಲಿ ನಿರೂಪಿತವಾಗಿದೆ. ಅಸ್ಸಾಂನ ಚಹಾದ ತೋಟ ಕತೆ ನಡೆಯುವ ಸ್ಥಳ ತಂದೆಯನ್ನು ಕಳೆದುಕೊಂಡು ನೀವಮಾ ಮೇಸ್ತ್ರಿಯ ಮನೆಯಲ್ಲಿ ಅವನ ಮಗ ಲಹರಿಯ ಜೊತೆಯಲ್ಲಿ ಬಾಲ್ಯ ಕಳೆಯುತ್ತಾಳೆ. ಲಹರಿಯ ಅಪ್ಪ ಮೇಸ್ತ್ರೀಯಾಗಿ ಕ್ರೂರಮನುಷ್ಯನಾಗಿರುತ್ತಾನೆ. ತಡವಾಗಿ ಬಂದ ಆಳುಗಳನ್ನು ಅವನು ಹಿಂಸಿಸುವ ಪರಿ ಅವರ್ಣನೀಯ. ಲಹರಿ ಮತ್ತು ನೀವಮಾ ಮದುವೆಯಾಗಿ ಸಂಸಾರ ಮಾಡಿಕೊಂಡಿರಬೇಕೆಂಬುದು ಲಹರಿ ತಾಯಿಯ ಬಯಕೆ ಆದರೆ ತನ್ನ ಮಗನಿಗೆ ಕೆಳವರ್ಗದ ಆಳಿನ ಮಗಳನ್ನು ತರುವುದೇ ಎಂಬುದು ಮೇಸ್ತ್ರೀಯ ಮನೋಭಾವ. ಲಹರಿಯು ಹೆಚ್ಚಿನ ವಿದ್ಯಾಭ್ಯಾಸಕ್ಕೆ ಹೊರಗೆ ಹೋಗುತ್ತಾನೆ. ಅವನು ಓದಿದಂತೆಲ್ಲ ಬಂಡಾಯ ಮನೋಧರ್ಮವನ್ನು ಮೈ ಗೂಡಿಸಿಕೊಳ್ಳುತ್ತಾನೆ ಸಮತಾವಾದದ ಪ್ರತಿಪಾದಕನಾಗಿ ಜೈಲು ಕಾಣುತ್ತಾನೆ ಅನಂತರ ಹಳ್ಳಿಗೆ ಬರುತ್ತಾನೆ ಆ ವೇಳೆಗಾಗಲೇ ನೀವಮಾ ಮನೆಯಿಂದ ಈಚೆ ಬಂದು ಆಳುಗಳ ಜೊತೆಯಲ್ಲಿಯೇ ವಾಸಿಸುತ್ತಾಳೆ. ಲಹರಿ ಮಲೇರಿಯಾದಿಂದ ಸಾಯುತ್ತಾನೆ. ಕೊನೆಗೆ ನೀವಮಾಳೂ ಸಾಯುತ್ತಾಳೆ. ಕತೆ ಬೇಕಾದಾಗ ಪಾತ್ರಗಳನ್ನು ರಂಗಕ್ಕೆ ತರುತ್ತಾ ಬೇಕೆಂದಾಗ ಸಾಯುಸುತ್ತಾ, ಉದ್ದೇಶಕ್ಕೆ ತಕ್ಕಂತೆ ಪರಿಸರವನ್ನು ನಿರ್ಮಿಸುವುದಕ್ಕೆ ಗಮನ ಕೊಟ್ಟಿದೆ. ಲೇಖಕರ ಆಶಯ ತತ್ವ ಕತೆಯಾಗಿ ಅರಳುವಲ್ಲಿ ಸೋಲುತ್ತದೆ ನೊಂದವರ ಶೋಷಿತರ ಪರ ಲೇಖಕರ ಮನಸ್ಸಿದೆ ಎಂಬುದಕ್ಕೆ ಇಲ್ಲಿ ಕಾಣುವ ಅಂಶ.

ಹೊಸತು ಕತೆ ಹೊಸ ಸಮಾಜ ನಿರ್ಮಾಣದ ಕನಸು ಮತ್ತು ಸಮತಾವಾದದ ಬಿರುಸು ಎರಡನ್ನೂ ಒಳಗೊಂಡಿದೆ. ಮುಂಬಯಿಗೆ ಕೆಲಸ ಹುಡುಕಲೆಂದು ಬಂದ ಗಣೇಶನು ಮಿತ್ರ ರಾಮಚಂದ್ರನ ಮನೆಯವರಿಗೆ ತೀರಾ ಆಪ್ತನಾಗುತ್ತಾನೆ ರಾಮಚಂದ್ರನ ತಂಗಿ ಸುಶೀ ಒಂದು ಮಗುವಿರುವ ವಿಧವೆ ಸುಶೀಯ ಸಂಪಾದನೆಯಿಂದ ಕುಟುಂಬ ನಿರ್ವಹಣೆಯಾಗುತ್ತಿರುತ್ತದೆ. ರಾಮಚಂದ್ರ ನಡೆಸುವ ಪ್ರೆಸ್ಸು ಕ್ರಾಂತಿ ಸಾಹಿತ್ಯ ಉತ್ಪಾದಿಸುತ್ತಿರುತ್ತದೆ. ಅದಕ್ಕೆ ಗಣೇಶನ ನೆರವೂ ಲಭಿಸುತ್ತದೆ. ಮೂವರು ಸಮಾನ ಮನಸ್ಕರಾಗಿರುತ್ತಾರೆ. ಗಣೇಶ ಸುಶಿಯನ್ನು ಮದುವೆಯಾಗಲು ಅನುಮತಿ ಕೇಳಾಲಾಗಿ ರಾಮಚಂದ್ರ ಒಪ್ಪುತ್ತಾನೆ. ಮನೆಯಲ್ಲಿ ಸಂತಸ ತುಂಬುತ್ತದೆ. ಕತೆಯ ಗತಿ ಸಹಜವಾಗಿ ಸಾಗುತ್ತದೆ. ಲೇಖಕರ ಆಶಯ ಇಂಥಲ್ಲಿ ನೆಲಕಚ್ಚಿ ನಡೆಯುತ್ತದೆ. ಎಲ್ಲಿಯೂ ಕೃತಕತೆಯಿಲ್ಲಿ ಮಾಸಿಕ ಹೊಯ್ದಾಟ, ತುಮುಲಗಳ ಚಿತ್ರಣ ಇಲ್ಲಿಲ್ಲ. ಆ ಕಾರಣಕ್ಕಾಗಿಯೇ ತಿರಸ್ಕರಿಸುವ ಮಟ್ಟದಲ್ಲಿ ಈ ಕತೆಯಿಲ್ಲ.

'ದೇಗುಲದಲ್ಲಿ ಪಾದರಕ್ಷೆ'ಕತೆಯು ನಿರಂಜನರ ಪ್ರಾರಂಭದ ಕತೆಗಳಲ್ಲೊಂದು. 'ದೇವರಿಗೂ ನನಗೂ ಈ ತರಹದ ಕತೆಗಳನನು ಬರೆದು ಬಳಿಕ ಮೆಲುದನಿಯಲ್ಲಿ ವಿರಸಗೀತೆ ಆರಂಭವಾಯಿತು' ಎಂದು ನಿರಂಜನರು ಟಿಪ್ಪಣಿಯಲ್ಲಿ ಹೇಳಿಕೊಂಡಿದ್ದಾರೆ. ತೀರಾ ಬಡವರಾದ ಲಿಂಗ ಮತ್ತವನ ಹೆಂಡತಿ, ಮಗ ಸುಬ್ಬ ಅನುಭವಿಸಿದ ಯಾತನೆಯೇ ಈ ಕತೆಯ ವಸ್ತು ಊರಿನ ಜಾತ್ರೆಯಲ್ಲಿ 'ದೇವಭಕ್ತರ ಉಚಿಷ್ಟ' ಪಡೆಯಲೆಂದು ಸುಬ್ಬ ದೇಗುಲಕ್ಕೆ ಬಂದಾಗ ಗೊತ್ತಾಗದೆ ಚಪ್ಪಲಿಯನ್ನು ಕಳಚಿ ಕೈಯಲ್ಲಿ ಹಿಡಿದು ಒಳಪ್ರವೇಶಿಸುತ್ತಾನೆ. ನೆರೆದಿದ್ದ ಬ್ರಾಹ್ಮಣ ಭಕ್ತರೂ ದೇಗುಲ ಅಶುಚಿಯಾಯಿತೆಂದು ಬೊಬ್ಬೆಯಿಡುತ್ತಾರೆ. ಈ ಕಾರಣಕ್ಕಾಗಿ ಅವನ ಅಪ್ಪ ಲಿಂಗನನ್ನು ಕರೆಸುವುದಲ್ಲದೇ ದಂಡ ಹಾಕಿ, ಮುಂದಿನ ವರ್ಷದ ಜಾತ್ರೆಗೆ ಬೆಳ್ಳಿಯ ಪಾದುಕೆಗಳೆರಡನ್ನೂ ಮಾಡಿಸಿಕೊಡುವ ಶಿಕ್ಷೆಯನ್ನು ವಿಧಿಸುತ್ತಾರೆ. ಐದಾರು ವರ್ಷಗಳ ನಂತರ ಗ್ರಾಮವನ್ನು ಸಂದರ್ಶಿಸಲು ಬಂದ ಅಧಿಕಾರಿವರ್ಗ ಚಪ್ಪಲಿ- ಬೂಟ್ಸ್ ಮೆಟ್ಟಿಕೊಂಡೇ ದೇಗುಲ ಪ್ರವೇಶ ಮಾಡುವುದಲ್ಲದೇ ಪ್ರಸಾದ ಸ್ವೀಕರಿಸುವುದರಲ್ಲಿ, ಆರತಿಯನ್ನೂ ಪಡೆಯದೇ ನಿರ್ಲಕ್ಷಿಸುತ್ತಾರೆ. ನಿಯಮಗಳೆಲ್ಲ ಉಳ್ಳವರಿಗೆ ಲಗತ್ತಾಗುವುದಿಲ್ಲವೆಂಬ ಲಿಂಗನ ನಿಟ್ಟುಸಿರಿನಲ್ಲಿ ಕತೆ ಮುಗಿಯುತ್ತದೆ.

'ಮೂರು ದುಡ್ಡು' ಕತೆ ಕೂಡ ನಿರಂಜನರ ಮೊದಮೊದಲ ಕತೆಗಳಲ್ಲೊಂದು. ಬಡವೆಯೊಬ್ಬಳಿಗೆ ಕೊಡಬೇಕಾದ ಮೂರು ಕಾಸನ್ನು ಕೊಡದೆ ಅವಳನ್ನು ಹಿಂಸಿಸುವ ಮುಕುಂದರಾಯ ಕೊನೆಗೆ ಅವಳ ಮಗ ದೇಜು ಹಣ ಕೇಳಿದಾಗ ಅವನನ್ನು ಹೊಡೆದು ಸಾಯಿಸಿಯೇ ಬಿಡುತ್ತಾನೆ. ಅವಳ ತಾಯಿ ಅಕ್ಕುವಿನ ಗುಡಿಸಲಿಗೆ ಬೆಂಕಿ ಬೀಳುತ್ತದೆ. ಮುಂಕುಂದರಾಯ ಯಾವ ಕಾರಣಕ್ಕಾಗಿ ಅಕ್ಕುವಿಗೆ ದುಡ್ಡು ಕೊಡಲು ಒಪ್ಪುವುದಿಲ್ಲವೆಂಬುದರ ಸುಳಿವೇ ಇಲ್ಲ. "ಐದಾರು ವರ್ಷಗಳ ಎಳೆಯನಾಗಿದ್ದಾಗ"೯ ಒಂದು ರಾತ್ರಿ ದೂರದಲ್ಲಿ ಒಂದು ಗುಡಿಸಲಿಗೆ ಬೆಂಕಿ ಬಿದ್ದುದ್ದನ್ನು ಕಂಡು ಈ ಕತೆ ಹೆಣೆದಿರಬೇಕು ಎಂದು ನಿರಂಜನು ಹೇಳಿಕೊಂಡಿದ್ದಾರೆ.

'ಮಹಾದೇವನ ಮಣಿ ಮಕುಟ ' ಕೂಡ ನಿರಂಜರ ಪ್ರಾರಂಭದ ಕತೆಗಳಲ್ಲೊಂದು ಮನುಷ್ಯನಿಗೂ ದೇವರಿಗೂ ಇರುವ ಸಂಬಂಧವೇನು? ಇವನು ಯಾರು? ಅವನು ಯಾರು"೧೦ ಈ ಪ್ರಶ್ನೆಗಳು ಬಾಲ್ಯದಲ್ಲೇ ನನ್ನನ್ನು ಕಾಡತೊಡಗಿದ್ದುವು. ಈ ಹಿನ್ನೆಲೆಯಲ್ಲಿ ಕತೆ ಸೃಷ್ಟಿಯಾಯಿತು. 38 ಇದು ನಿರಂಜನರ ಮಾತು. ಊರಿನ ಮುಖ್ಯಸ್ಥರ ದೇವಾಲಯದ ಮಣಿ ಮಕುಟವನ್ನೂ ತ್ರಿಶೂಲವನ್ನೂ ಕಳವು ಮಾಡಿಸಿ ಕಳವಿನ ಅಪಾದನೆಯನ್ನು ಊರ ಬಡವ, ಕೂಲಿಕಾರ ಸೋಮನ ಮೇಲೆ ಹೊರಿಸಿ, ಅವನು ಅಪರಾಧಗಳನ್ನು ಒಪ್ಪಿಕೊಳ್ಳುವಂತೆ ಮಾಡಿ ಶಿಕ್ಷೆ ವಿಧಿಸಿದ ಕರಾಳ ಕೃತ್ಯವನ್ನು "ಈ ಕತೆ ಹೇಳುತ್ತದೆ. ನಿರೂಪಕನಿಗೆ ಮೊಕ್ತೇಸರನೇ ಕಳವು ಮಾಡಿಸಿದ ಸಂಗತಿ ಊರ ಅಕ್ಕಸಾಲಿಗನ ಮೂಲಕ ತಿಳಿಯುತ್ತದೆ. ಈ ಕತೆ ದಲಿತರನ್ನು ಹುರಿದು ಮುಕ್ಕುವ ಧರ್ಮದ ವಾರಸುದಾರರ ಬಣ್ಣವನ್ನು ಬಯಲು ಮಾಡುತ್ತದೆ."೧೧

'ಸರೋಜಿಗೆ ಬರೆದ ಕೆಲವು ಕಾಗದಗಳು' ಕತೆಯಲ್ಲಿ ಆಸ್ಪತ್ರೆಗೆ ರೋಗಿಯಾಗಿ ದಾಖಲಾದ ವ್ಯಕ್ತಿ ತಾನು

ಪ್ರೀತಿಸುತ್ತಿದ್ದವಳಿಗೆ ಬರೆದ ಕೆಲವು ಪತ್ರಗಳನ್ನು ಒಳಗೊಂಡಿದೆ. ಜ್ವರದಿಂದ ನರಳುತ್ತಿದ್ದರೂ ಸಹ ಅವನು ಜಾತೀಯ, ಮತೀಯ ಆಗುಹೋಗುಗಳನ್ನು ಬಹು ವಿಷಾದದಿಂದ, ಸಿಟ್ಟಿನಿಂದ ಈ ಪತ್ರಗಳಲ್ಲಿ ದಾಖಲು ಮಾಡುತ್ತಾನೆ. 'ನಾನು ಮಾನವೀಯತೆಯ ಪ್ರತಿಪಾದಕ, ಮನುಷ್ಯತ್ವದ ಆರಾಧಕ, ಈ ಖಚಿತ ನಿಲುವಿನ ಅಸ್ಪಷ್ಟ ರೂಪವನ್ನು ೧೯೪೨ರಲ್ಲಿ ಬರೆದು ಕತೆಯಲ್ಲಿ ಕಾಣಬಹುದು. ಪತ್ರಮುಖೇನ ಕತೆ ಮಾಡಲು ಹೊರಡುವುದು ನಿರಂಜನರ ಮಾಮೂಲೀ ಅಭ್ಯಾಸ. ಚುರುಕಾದ, ಸರಸದ ಮತ್ತು ಪರಿಣಾಮಕಾರಿ ಸಂಭಾಷಣ ಈ ಕತೆಯಲ್ಲಿದೆ.

'ಮೊಡಚೆದುರಿತ್ತು' ಕತೆಯಲ್ಲಿ ಕಾರ್ಖಾನೆಯೊಂದರ ಮೂಲಕ ಜೀವನ ಸಾಗಿಸುವ ನೌಕರರ ಬದುಕಿನ ಚಿತ್ರಣವಿದೆ. ಬೋನಸ್ ಕೇಳುವ ವಿಚಾರದಲ್ಲಿ ಮುಷ್ಕರ ನಡೆದು ಬಡತನದ ಬದುಕು ಮತಷ್ಟು ಭೀಕರವಾಗುತ್ತದೆ. ಬದುಕಿನಲ್ಲಿ ಕವಿದಿದ್ದ ಮೋಡ ಚದುರುವುದು ಮುಷ್ಕರ ಯಶಸ್ವಿಯಾಗುವುದರಿಂದ ಅಲ್ಲ, ಸೋಲಿನಿಂದ, ಸೋಲಿದ್ದರೂ ಮುಂದೊಂದು ದಿನ ತಮ್ಮ ಬೇಡಿಕೆ ಈಡೇರುವುದೆಂಬ ನಿರೀಕ್ಷೆಯಿಂದ ಕಾರ್ಮಿಕರ ಸಂಪು, ಬಂಡವಾಳಗಾರರ ಪಿತೂರಿ, ಸಂಘದ ಒಗ್ಗಟ್ಟು, ಹೋರಾಟ, ಒಡಕು ಮೂಡಿಸುವ ಪ್ರಯತ್ನಗಳು ಎಲ್ಲವೂ ಕತೆಯಲ್ಲಿ ಬಂದಿವೆ.

"ಧ್ವನಿ" ನಿರಂಜನರ ಗಮನಾರ್ಹ ಕತೆ. ವಾಸ್ತವ ಘಟನೆಯೊಂದು ಕತೆಗಾರನ ಆಶಯವನ್ನು ಮುಟ್ಟಿಸಲು ಎಷ್ಟರ ಮಟ್ಟಿಗೆ ನೆರವು ನೀಡುತ್ತದೆಂಬುದಕ್ಕೆ ಈ ಕತೆ ಸಾಕ್ಷಿ "ಕ್ರೂರ ದಬ್ಬಾಳಿಕೆಯೆದುರು ಮೂಕನೂ ಮಾತಾಡುತ್ತಾನೆ ಎಂಬುದನ್ನು ನಿರೂಪಿಸುವ ಫ್ಯಾಂಟಸಿ ಶೈಲಿಯ ಕತೆ ಇದು" ೧೩

ಕಡಲೇಕಾಯಮ್ಮ (ಕತೆಯಲ್ಲಿಯಾರಿಗೂ ಹೆಸರಿಲ್ಲ) ತನ್ನ ಆ ವೃತ್ತಿ ಕೈಗೊಳ್ಳುವ ಮೊದಲು ಗಂಡನಿಂದ ಅನುಭವಿಸಿದ ಕಷ್ಟಪರಂಪರೆ ದೊಡ್ಡದೇ. ಇದರ ವಿವರಣೆಯಿಂದಲೇ ಕತೆ ಪ್ರಾರಂಭವಾಗುತ್ತದೆ. ಕುಡುಕಗಂಡ ಗರ್ಭದಾನ ಮಾಡಿದಾಗ ಮಗನಿಗೆ ಜನ್ಮ ನೀಡುತ್ತಾಳೆ. ತನ್ನ ಬಡತನ ಮಗನ ಕಾಲಕ್ಕಾದರೂ ಕಣ್ಮರೆಯಾಗಬಹುದಾದ ಒಂದೇ ಒಂದು ಸಾಧ್ಯತೆಯನ್ನೂ ಮಗನ ಮೂಕತನ ಇಲ್ಲವಾಗಿಸಿ ಬಿಡುತ್ತದೆ. ಆದರೆ ಹತ್ತೊಂಭತ್ತು ವರ್ಷಗಳ ನಂತರ ಆ ಮೂಕ ಮಗ ಮಾತಾನಾಡುತ್ತಾನೆ. ಸಾಮಾಜಿಕ ಜೀವನ ತೀರ ಅಧ್ವಾನವಾಗಿ ಕಡ್ಲೆಕಾಯಿ ಮಾರಿ ಜೀವನ ಸಾಗಿಸುವ ಅವಳು ಸರ್ಕಾರಕ್ಕೆ ತೆರಿಗೆ ಕೊಡಬೇಕಾಗಿ ಬರುವ ರಾಜ್ಯದ ದುಃಸ್ಥಿತಿ, ಪ್ರಜೆಗಳಿಗಾದ ಅನ್ಯಾಯದ ವಿರುದ್ಧ ಪ್ರತಿಭಟಿಸುವ ಜನಗಳ ಮಧ್ಯೆ ಮೂಕಮಗ ಸೇರಿಕೊಳ್ಳುತ್ತಾನೆ. ದೌರ್ಜನ್ಯ ತಾಳದೇ ಮಾತಾಡುತ್ತಾನೆ. ಸನ್ನಿವೇಶದ ಭೀಕರತೆಯೇ ಅವನಿಗೆ ಮಾತು ಬರುವಂತೆ ಮಾಡುತ್ತದೆ. ಆದರದು ತಾತ್ಕಾಲಿಕವಷ್ಟೆ. ಕೆಲದಿನಗಳ ತರುವಾಯ ಅವನ ಮಾತು ನಿಂತು ಹೋಗುತ್ತದೆ. ಕಡಲೆಕಾಯಮ್ಮನ ಮಗ ಮತ್ತೆ ಮೊದಲಿನಂತಾಗಿ ಬಿಡುತ್ತಾನೆ. ಕತೆಯ ಆಶಯ ಮತ್ತು ಧ್ವನಿ ಆಳವಾಗಿದೆ. " ನಗ್ನತೆಯ ಎದುರು ಬಾಯಿಬಿಟ್ಟು ಮಾತುಕಲಿತ ಉದಾಹರಣೆಯೇ ನಿರಂಜನರ ಕತೆಗಾರಿಕೆಗೆ ವಸ್ತುವಾದದ್ದು, ಬೇರೊಂದು ರೀತಿಯಲ್ಲಿ ನಿರೂಪಣೆಗೊಳ್ಳುತ್ತದೆ." ೧೪ ಬದುಕಿನ, ಜೀವನದ ನಗ್ನತೆ ಅದಕ್ಕಿಂತ ಭೀಕರವಾದುದೆಂಬುದು ಇಲ್ಲಿನ ಧ್ವನಿ.

ಜೀವನದ ಭೀಕರತೆ ಮೂಕನಿಗೆ ಮಾತುತರಿಸಿ ದಬ್ಬಾಳಿಕೆಯ ವಿರುದ್ಧ ದನಿಯೆತ್ತುತುವಂತೆ ಮಾಡುತ್ತದೆಂಬ ಆಶಯ ಬಂಡಾಯ ಸಾಹಿತ್ಯ ಮೀಮಾಂಸೆಯ ಲಕ್ಷಣವಾಗಿ ಕಾಣುತ್ತವೆ. ಈ ಕತೆಯಲ್ಲಿ ಮೂಕನಿಂದ ಹಠಾತ್ತನೆ ಹೊರ ಹೊಮ್ಮುವ ಧ್ವನಿ ಶೋಷಣೆಯ ಸರ್ವಾಧಿಕಾರದ ವಿರುದ್ಧ, ಸಮಾನತೆಯ ಪರವಾಗಿ ಎತ್ತಿದ ಶೋಷಿತರ ಒಟ್ಟು ಧ್ವನಿಯಾಗಿದೆ. ಒಟ್ಟಾಗಿ ಬದಲಾಗುತ್ತಿರುವ ನಮ್ಮ ಸ್ವತಂತ್ರ ಭಾರತದ ಸ್ಥಿತಿಯನ್ನು ಸಂಕೇತಿಸುವುದಲ್ಲದೆ, ಅನ್ಯಾಯದ ವಿರುದ್ಧ ಸಿಡಿದೇಳುವ ಮಾನವನ ಅಧಮ್ಯ ಚೇತನವನ್ನು ಸೂಕ್ಷ್ಮವಾಗಿ ಗುರುತಿಸಿ, ಕಲೆಯಾಗಿ ದಾಖಲಿಸುತ್ತದೆ. ಅರ್ಥಪೂರ್ಣ ಪ್ರತಿಮೆಗಳ ಕುಶಲ ಸಂಯೋಜನೆಯ ಮೂಲಕ ಕತೆ ಸಾಂಕೇತಿಕರೂಪವನ್ನು ಪಡೆದುಕೊಂಡು, ಅರ್ಥ ಪರಂಪರೆಯನ್ನೇ ಬೆಳೆಸುವುದು - ವಸ್ತು ಮತ್ತು ರಚನಾವಿಧಾನದಲ್ಲಿ ಕತೆಗಾರರು ಸಾಧಿಸಿದ ಖಚಿತ, ಅರ್ಥಪೂರ್ಣ ಬೆಳವಣಿಗೆಯಾಗಿದೆ." ೧೫

ಧ್ವನಿ ನಿರಂಜನರ ಪ್ರಾತಿನಿಧಿಕ ಕತೆ. ಅವರ ಆಶಾವಾದ , ಸಾಮಾಜಿಕ ಶೋಷಣೆಯ ವಿರುದ್ಧದ ಧ್ವನಿ. ಅದು ಕತೆಯಲ್ಲಿ ಅನಾವರಣಗೊಂಡ ರೀತಿ ಎಲ್ಲವೂ ಗಂಭೀರವಾಗಿದೆ, ಸತ್ವಯುತವಾಗಿದೆ. ಮೂಕನಿಗೆ ಬಾಯಿ ಬರುವ ಪ್ರತಿಮಾತ್ಮಕ ಸಾಂಕೇತಿಕ ಧ್ವನಿ ಏನೆಲ್ಲವನ್ನೂ ಹೇಳುತ್ತದೆ. ಕಡಲೆಕಾಯಮ್ಮನ ಮಗ ಆಡುವ ಮೊದಲ ಮಾತುಗಳು ಕತೆಯ ಆಶಯವನ್ನು ವಾಚ್ಯ ಮಾಡುತ್ತದೆ. ಆದರೆ ಅವನು ಮಾತು ಮರೆಯುವುದೂ ಕೂಡ ಸನ್ನಿವೇಶದ ಭೀಕರತೆಯಿಂದಲೇ. ಇದು ನಿರಂಜನರ ಕೊನೆ ಕೊನೆಯ ಕತೆಗಳಲ್ಲೊಂದು. ಈ ಕತೆ ಇನ್ನೊಂದು ಅರ್ಥದಲ್ಲಿ ನಿರಂಜನರ ಇಡೀ ಸಾಹಿತ್ಯಾಭಿವ್ಯಕ್ತಿಗೆ ಒಂದು ರೂಪಕವಾಗುತ್ತದೆ. ಅದುಮಿ ಇಡಲು ನೋಡಿದ ಸಮಾಜದಲ್ಲಿ ಪ್ರತಿಭಟನೆಯ ಧ್ವನಿಯಾಗಿ ಅವರ ಬರವಣಿಗೆ ಮೊದಲಾಯಿತು. ತಮ್ಮದೇ ಆದ ಸ್ವಂತ ಧ್ವನಿ ಪಡೆದ ಕತೆಗಾರರು ಅವರು.

'ಇರುಳ ಛಾಯೆ' ಕತೆ ನಿರಂಜನರ ಕತೆಗಳ ಆಶಯಕ್ಕಿಂತ ಹೆಚ್ಚೇನೂ ಭಿನ್ನವಾಗಿರದಿದ್ದರೂ ಕಥಾವಸ್ತು ಮತ್ತು ನಿರೂಪಣೆ ಭಿನ್ನವಾಗಿದೆ. ಕಾರ್ಖಾನೆಗಳ ಮಾಲೀಕ ಗಣೇಶರಾಯರನ್ನು ಕೇಂದ್ರವಾಗಿಟ್ಟುಕೊಂಡಿದೆ. ನಾಲ್ಕು ಜನ ಹೆಣ್ಣುಮಕ್ಕಳು ಹೆಂಡತಿ ಸತ್ತ ನಂತರ ಶ್ರೀಮಂತರಾಗುತ್ತ ಹೋದ ಗಣೇಶರಾಯರಿಗೆ ಹಣವು ಶಾಂತಿ, ನೆಮ್ಮದಿ ಕೊಡಲಿಲ್ಲ ಎಂಬುದರೊಡನೆ ಕತೆ ಕೊನೆಯಾಗುತ್ತದೆ. ರಷ್ಯಾದ ಮುನ್ನಡೆ, ಕಾರ್ಮಿಕರ ಕ್ಷಿಪ್ರಗತಿಯ ಕೆಲಸ ರಾಯರಿಗೆ ಯಾವಾಗಲೂ ಮೆಚ್ಚುಗೆಯೇ. ಆದರೆ ರಾಯರ ಸಂಕುಚಿತ ಬುದ್ಧಿ ಭಾವಗಳು ಲೋಕದ ಕಾರ್ಮಿಕರ, ದಲಿತರ ಸ್ವರೂಪವನ್ನು ಅರಿಯಲು ಕೊನೆಯವರೆಗೂ ಇಚ್ಛಿಸುವುದೇ ಇಲ್ಲ. ಅವಿದ್ಯಾವಂತರೆಲ್ಲ ಅವರ ದೃಷ್ಟಿಯಲ್ಲಿ ಮೂರ್ಖರು, ಬುದ್ಧಿ ಹೀನರು. ಶ್ರೀಮಂತರು ಮಾಲೀಕನೊಬ್ಬನ ಮಾನಸಿಕ ಸ್ತರಗಳನ್ನು ತಿಳಿಸುತ್ತಲೇ ಕಾರ್ಮಿಕರ ಜೀವನಗತಿ ಮತ್ತು ಹಂಬಲ, ಸಂಕಷ್ಟಗಳನ್ನು ನೇಪಥ್ಯದಲ್ಲಿ ಬಿಚ್ಚಿ ತೋರುವುದು. ಹೀಗೆ ನಿರಂಜನರ ಕೆಲವು ಕತೆಗಳನ್ನು ಗಮನಿಸಿದಾಗ ಅವು ವರ್ಗನೆಲೆಯಲ್ಲಿ ಅನಾವರಣವಾಗಿರುವುದು ಕಾಣಬರುತ್ತದೆ.

## ಪ್ರಗತಿಶೀಲ ಕಥೆಗಳಲ್ಲಿನ ವರ್ಗ ಸಂಬಂಧಿ ನೆಲೆಯ ವಿವೇಚನೆ

ಕಟ್ಟಿಮನಿಯವರ ಸುಮಾರು ಹದಿನೈದಕ್ಕೂ ಹೆಚ್ಚುಕತೆಗಳಲ್ಲಿ ವರ್ಗ ಸಂಬಂಧೀ ವಿಚಾರಗಳು ಪ್ರಧಾನೆಲೆಯಾಗಿ ಅನಾವರಣಗೊಂಡಿವೆ. ಕಾರವಾನ್, ಗೆಳೆಯರು, ಹೊಸ ವರ್ಷದ ಹಳೆಯರಾತ್ರಿ, ದೀಪಾವಳಿಯ ಕತ್ತಲೆ ಈ ಮೊದಲಾದ ಕತೆಗಳಲ್ಲಿ ಪ್ರಕಟವಾಗಿರುವ ವರ್ಗ ಪ್ರಜ್ಞೆ ಹಸಿವು ಬಡತನಗಳನ್ನು ಆಧರಿಸಿದ್ದು, ಬಡತನ ಮತ್ತು ಶ್ರೀಮಂತಿಕೆಗಳ ಪರಸ್ಪರ ವಿರುದ್ಧ ಧ್ರುವಗಳು ಇಂಥ ಕಡೆ ಸಹಜವಾಗಿಯೇ ದಾಖಲಾಗುತ್ತವೆ. 'ಕಾರವಾನ್' ಕತೆಯ ಪಾತ್ರಗಳು ಹೀನಾಯ ಬದುಕು ನಡೆಸುತ್ತವೆ. ಹೆಂಡತಿಯೇ ದುಡಿದು ಸಾಲಾಗಿ ನಿಲ್ಲುವ ಮಕ್ಕಳಿಗೂ, ರೋಗಿಯಾದ ಗಂಡನಿಗೂ ಅನ್ನವಿಕ್ಕುವ ದುಃಸ್ಥಿತಿ ಎದುರಾಗುತ್ತದೆ. ಇಂಥ ಹೀನಾಯ ಬಾಳನ್ನು ಇಂಡಿಯಾದೆಲ್ಲೆಡೆ ನೋಡುತ್ತೇವೆಂಬ ಕಟುಸತ್ಯವನ್ನು ಲೇಖಕ ಈ ಮೂಲಕ ಹೇಳ ಹೊರಟಿದ್ದಾರೆ. ಆದರೆ ಲೇಖಕರು ಇಂಡಿಯಾ ಎನ್ನದೇ 'ಹಿಂದೂಸ್ಥಾನ' ಎನ್ನುತ್ತಾರೆ. ಮುಂದುವರಿದು 'ತಾಯಿ ಭಾರತ ಮಾತೆಯ ಸಂಕಷ್ಟ ಎನ್ನುತ್ತಾರೆ. ಇಲ್ಲೆಲ್ಲ ಲೇಖಕರ ಸಾಮಾಜಿಕ ಪ್ರಜ್ಞೆ ಕೆಲಸ ಮಾಡುವ ಬಗೆ ತೀರಾ ಬಾವುಕ ನೆಲೆಯದು ಕಾರವಾನ್ ಕತೆಯಲ್ಲಿನ ಸಂಕಷ್ಟಗಳಿಗೆ ಬರಗಾಲ ಕಾರಣ. ಈ ಬರಗಾಲದ ಕಾರಣಕ್ಕೆ ನೇರವಾಗಿ ಜವಾಬ್ದಾರಿಯಾಗುವ ವ್ಯವಸ್ಥೆಯ ವೈಪರಿತ್ಯಗಳು ಕತೆಯಲ್ಲಿ ಶೋಧಿತಗೊಳ್ಳುವುದಿಲ್ಲ ಹಸಿವು ಬಡತನಗಳು ತಾಯ್ತನವನ್ನು ರಾಕ್ಷಸತ್ವಕ್ಕೆ ಪರಿವರ್ತಿಸಬಲ್ಲುದೆಂಬುದಷ್ಟೆ ಇಂಥ ಕಡೆ ದಾಖಲಾಗುತ್ತದೆ. ಸಾಹುಕಾರನಿಗೆ ಹೊಲ ಮಾರಿ ಬಂದ ಆ ಬಡವ ರೋಗದ ಹುಳುವಾಗಿಯಷ್ಟೆ ತನ್ನ ದೈನ್ಯತೆಯನ್ನು ತೋರುತ್ತಾನೆ. 'ಗೆಳೆಯರು' ಕತೆಯ ವರ್ಗ ನೆಲೆಯು ಕೋಮುವಾದಿ ವ್ಯಕ್ತಿಗಳ ವಿಚಿದ್ರಕಾರಿಶಕ್ತಿಯನ್ನು ಅವಲಂಬಿಸಿದಂತೆ ಬಂದಿದೆ.

ಈ ಕತೆಯಲ್ಲಿ ಕಟ್ಟಿಮನಿಯವರು ' ಹಿಂದೂ' ಎಂದು ಹೇಳಿಕೊಂಡು ತಿರುಗುವ ರಾಷ್ಟ್ರ ವಿಭಜಕಶಕ್ತಿಗಳನ್ನು ಟೀಕಿಸುತ್ತಾರೆ. ೧೯೪೫ರ ಕಾಲದ ರಾಜಕೀಯ ಮತ್ತು ಸಾಮಾಜಿಕ ವಿಷಮತೆಗಳನ್ನೂ ಅದರಿಂದ ಮುಂದೊದಗಬಹುದಾದ ದುರಂತಗಳನ್ನು ಸೂಚ್ಯವಾಗಿ ಹೇಳುತ್ತಾರೆ. ಹೊಸ ವರ್ಷದ ಮುನ್ನಾ ದಿನದಲ್ಲಿ ಇದ್ದ ಸಾರ್ವತ್ರಿಕ ರಜೆಯೇ ಬಡಜನಗಳ ಒಂದು ದಿನದ ಅನ್ನವನ್ನು ಕಿತ್ತು ಕೊಂಡಿದೆಂಬ ದನಿ 'ಹೊಸ ವರ್ಷದ ಹಳೆಯ ರಾತ್ರಿ' ಕತೆಯಲ್ಲಿದೆ. ಇಲ್ಲಿನ ಬಡತನ ಹಸಿರುವುಗಳು ವ್ಯವಸ್ಥೆಯನ್ನು ಆಧರಿಸಿದ್ದು ವ್ಯವಸ್ಥೆಯಿಂದಲೇ ಉಂಟಾದದ್ದು. ಈ ಕತೆಯಲ್ಲಿ ಸುಡು ವಾಸ್ತವವಷ್ಟೆ ದಾಖಲಾದರೆ ದೀಪಾವಳಿಯ ಕತ್ತಲೆಯಲ್ಲಿ ಆಶಾವಾದ ಕಾಣಿಸಿಕೊಳ್ಳುತ್ತದೆ. ಇಂದಲ್ಲ. ನಾಳೆ ವರ್ಗ ತಾರತಮ್ಯಗಳು ಅಳಿಯುತ್ತವೆಂಬ ಭಾವನೆಯಿಂದಾಗಿ ಕಟ್ಟಿಮನಿ ಕತೆಗಳು ಪ್ರಗತಿಶೀಲ ಲಕ್ಷಣವನ್ನು ಆವಾಹಿಸಿಕೊಳ್ಳುತ್ತವೆ. ವರ್ಗನೆಲೆ ಕೇವಲ ಮನುಷ್ಯ ಸಂಬಂಧಿಯಷ್ಟೇ ಅಲ್ಲ ಪ್ರಾಣಿ ಸಂಬಂಧಿಯೂ ಆದದ್ದೂ ಎಂಬ ಅಂಶ 'ಮುದ್ದು' ಕತೆಯಲ್ಲಿದೆ. ಆರ್ಥಿಕ ಸಂಕಷ್ಟಗಳು ಪ್ರೀತಿ ವಾತ್ಸಲ್ಯಗಳಿಗೂ ಅಡ್ಡಿ ಆತಂಕಗಳನ್ನು ಒಡ್ಡುತ್ತವೆಂಬುದು ಇದರ ಆಶಯ. 'ಬೂಟ್ ಪಾಲಿಶ್' ಕತೆಯಲ್ಲಿ ಕೂಡ ಬಡವ ಶ್ರೀಮಂತರ ವೈದೃಶವರ ನೆಲೆ ಇದ್ದರೂ ಅದು ಹೆತ್ತ ತಾಯಿಗಾಗಿ ಹಂಬಲಿಸುವ ಬಾಲಕನ ಭಾವನಾತ್ಮಕಸ್ತರದಲ್ಲಿ ಬಿಚ್ಚಿಕೊಂಡಿದೆ. ಹೆತ್ತ ಮಗುವನ್ನು ಎಸೆದು ಹೋದ ತಾಯಿ ಮತ್ತು ತಾಯಿ ಮಮತೆಗಾಗಿ

ಹಂಬಲಿಸುವ ಬಾಲಕ ಈ ಪರಸ್ಪರ ಮತ್ತು ಭಿನ್ನ ಅಂಶಗಳಷ್ಟೆ ಕತೆಯಲ್ಲಿವೆ. ತಾಯಿಯಾದವಳು ಹಾಗೆ ಮಾಡಲು ಒದಗಿ ಬಂದ ಅನಿವಾರ್ಯಗಳತ್ತ ಕತೆಗಾರನ ದೃಷ್ಟಿಯಿಲ್ಲ ಕಾರವಾನ್ ಕತೆಯ ತಾಯಿಗೂ ಈ ಕತೆಯ ತಾಯಿಗೂ ಸಾಕಷ್ಟು ಅಂತರವಿದ್ದರೂ ವರ್ಗ ನೆಲೆಗಾಗಿಯಷ್ಟೆ ಈ ಪಾತ್ರಗಳನ್ನು ಬಳಸಿಕೊಳ್ಳಲಾಗಿದೆ. ಇದೇ ವರ್ಗ ನೆಲೆ ಕುರುಡ ಹೇಳಿದ ಕತೆಯಲ್ಲಿ ಜಮೀನ್ದಾರ ಮತ್ತು ಸಾಧಾರಣ ರೈತರ ವೈದೃಶ್ಯತೆಯಲ್ಲಿಬಂದಿದೆ ಜಮೀನ್ದಾರ ಕ್ರೌರ್ಯದ ಅನಾವರಣ ಈ ಕತೆಯ ಉದ್ದೇಶ ಕಾರವಾನ್ ಕತೆಯಲ್ಲಿ ಆಂಶಿಕವಾಗಿ ಕಾಣಿಸಿಕೊಳ್ಳುವ ಜಮೀನ್ದಾರ ಈ ಕತೆಯಲ್ಲಿ ಕ್ರೌರ್ಯವು ಶೋಷಣೆಯನ್ನು ಎಸಗುವ ಪರಿ ವಿಸ್ತೃತವಾಗಿದೆ. ಇಲ್ಲಿ ಕಾಣಿಸಲಾದ ವರ್ಗನೆಲೆಯು ಮುಯ್ಯಿಗೆ ಮುಯ್ಯಿ ಸಿದ್ಧಾಂತದ್ದು, ಜಮೀನ್ದಾರನ ಕಾರ್ಯ ಲಂಪಟತೆಗಳನ್ನು ತಾಮಸ ಮಾರ್ಗದಲ್ಲೇ ನಾಶಮಾಡುವ ರೈತನ ಮನೋಭಾವದಿಂದಾಗಿ ವರ್ಗ ಸಂಘರ್ಷವನ್ನು ಸ್ಪಷ್ಟವಾಗಿ ತೋರಿಸಲಾಗಿದೆ. ಶೋಷಿತ ಚಿತ್ರವಷ್ಟೇ ಕಟ್ಟಿಮನಿಯವರ ವರ್ಗ ಸಂಬಂಧೀನೆಲೆಗಳನ್ನು ಹೇಳದೇ ಶೋಷಕನ ಸ್ವರೂಪ ಅಂತ್ಯಗಲನ್ನು ಅದಕ್ಕೆ ಸೇರಿಸಲಾಗಿದೆ. ಅನ್ಯಾಯಕ್ಕೆ ಶೋಷಣೆಗೆ ಒಳಗಾದ ವ್ಯಕ್ತಿ ಸಿಡಿದೇಳುವ ಚಿತ್ರಣದಿಂದ ಕಟ್ಟಿಮನಿಯವರ ವರ್ಗ ಪ್ರಜ್ಞೆ, ಮತ್ತೊಂದು ಆಯಾಮವನ್ನು ಕಾಣಸಿಕೊಡುವ ಪ್ರಯತ್ನ ಮಾಡುತ್ತದೆ.

'ಆಗಸ್ಟ್ ಒಂಭತ್ತು' ಕತೆಯಲ್ಲಿ ವ್ಯಕ್ತವಾಗುವ ವರ್ಗ ಸಂಬಂಧೀ ನೆಲೆಗಳು ಸಂಕೀರ್ಣವಾಗಿದ್ದು, ಒಂದಕ್ಕಿಂತ ಹೆಚ್ಚಿನ ಅಂಶಗಳು ಪರಸ್ಪರ ಥಳಕು ಹಾಕಿಕೊಂಡಿವೆ. ದೇಶ ರಕ್ಷಣೆ, ಬದುಕಿನ ಅನಿವಾರ್ಯಗಳನ್ನು ವಿರುದ್ಧ ಧ್ರುವಗಳಲ್ಲಿಟ್ಟು ನೋಡಲಾಗಿದೆ. ದೇಶ ರಕ್ಷಣೆ ಯತ್ತ ಗಮನವಿಟ್ಟು ಸೈನಿಕನ ಹೆಂಡತಿಯನ್ನು ಹಣವುಳ್ಳವರು ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳಲು ಯತ್ನಿಸುವ ಚಿತ್ರಣ ಇಲ್ಲಿದ್ದು, ಬಡತನಕ್ಕೆ ಪರಿಹಾರವಾಗಿ ಉದಾರತೆಯ ಮನೋಭಾವದ ಮುಖವಾಡ ಹೊತ್ತ ಸ್ವಾರ್ಥದ ಮನಸ್ಸು ಅನಾವರಣವಾಗಿದೆ. ಮತ್ತೊಬ್ಬನ ಹಂಗಿನಲ್ಲಿದ್ದು ಬದುಕನ್ನು ಛಿದ್ರ ಮಾಡಿಕೊಳ್ಳಬಾರದೆಂಬ ಸೈನಿಕನ ಹೆಂಡತಿಯ ಆತ್ಮ ವಿಶ್ವಾಸ ಇಂಥಲ್ಲಿ ಕಾಣದೇ ಅಭಿಮಾನೀ ಭಾರತನಾರಿಯ ಶೀಲ ಸಂರಕ್ಷಣೆಯಂಥ ಬಾವುಕನೆಲೆಯೇ ಮುಖ್ಯವಾಗುತ್ತದೆ. ಅಂದರೆ ಗಂಡ ದೂರ ವಿದ್ದುದರಿಂದಲೂ ಅವಳು ಬಡವೆಯಾಗಿದ್ದರಿಂದಲೂ ಇಂಥ ಸಂಕಷ್ಟಗಳನ್ನು ಎದುರಿಸಬೇಕಾಗಿದೆಯೆಂಬುದು ಇಲ್ಲಿನ ವಾದ 'ಹುತಾತ್ಮ' ಕತೆಯಲ್ಲಿ ಇಂಥ ಆಶಯಗಳು ಮತ್ತೊಂದು ರೂಪದಲ್ಲಿ ವ್ಯಕ್ತಿವಾಗಿದೆ. ಸ್ವಾತಂತ್ರ್ಯ ಹೋರಾಟದ ಹೆಸರಿನಲ್ಲಿ ದೇಶ ಪ್ರೇಮದ ನೆವದಲ್ಲಿ ನಡೆದ ಅನ್ಯಾಯ ಅಕ್ರಮಗಳು ಈ ಕತೆಯ ಮೂಲಕ ಅನಾವರಣಗೊಂಡಿದೆ ಇಲ್ಲಿನ ಮೇಲ್ವರ್ಗ ಮತ್ತು ಕೆಳವರ್ಗಗಳ ಪರಸ್ಪರ ವೈದೃಶ್ಯವು ಸ್ವಾರ್ಥ ತ್ಯಾಗಗಳನ್ನು ಆಧರಿಸಿದಂತೆ ಬಂದಿವೆ. ಪಟ್ಟಭದ್ರ ಹಿತಾಸಕ್ತಿಗಳು ಸಮಾಜದಲ್ಲಿ ಬೇರೂರಿ ಶೋಷಿಸುವ ಇಂಥ ಪ್ರಕ್ರಿಯೆಯನ್ನು 'ಸೆರೆಯಿಂದ ಹೊರಗೆ' ಕತೆಯಲ್ಲಿ ಬಿಂಬಿಸಿ, ಧರ್ಮಗುರುಗಳೆನಿಸಿ ಕೊಂಡವರ ತ್ಯಾಗದ ಹಿಂದಿರುವ ಕಪಟತೆಯನ್ನು ತೋರಲಾಗಿದೆ. ಸ್ವಾಮಿಗಳೆನಿಸಿಕೊಂಡವರ ಕುಟಿಲ ಉದಾರತೆಗಳು ಬಡವಿದ್ಯಾರ್ಥಿಗಳನ್ನು ದಾಳವಾಗಿರಿಸಿಕೊಂಡು ಮೆರೆಯುವ ವಿಚಾರ ಇಲ್ಲಿದೆ. ವರ್ಗ ಅಸಮಾನತೆಯೇ ಇದಕ್ಕೆಲ್ಲ ಕಾರಣ ಎಂಬ ದನಿ ಈ ಕತೆಯಲ್ಲಿದ್ದು, ಅದರ ವಿರುದ್ಧ ಹೋರಾಡುವ ಮನಸ್ಸುಗಳನ್ನು ಚಿತ್ರಿಸುವುದರ ಮೂಲಕ ಕಟ್ಟಿಮನಿಯವರು ಅಸಮಾನತೆಗಳ

ವಿರುದ್ಧ ಕೆಂಡ ಕಾರುತ್ತಾರೆ. 'ಗಿರಾಜಾ ಕಂಡ ಸಿನಿಮಾ'ದ ವರ್ಗ ವೈಷಮ್ಯಗಳನ್ನು ಸಾಲು ಸಾಲಾಗಿ ಪ್ರದರ್ಶಿಸುವುದಷ್ಟೇ ಲೇಖಕರ ಕೆಲಸವಾಗಿ ಬಿಟ್ಟಿದೆ ಸಾಮಾಜಿಕ ಅಸಮಾನತೆಯಿಂದ ಆಗುವ ದುರಂತಗಳು ಕುಟುಂಬದ ಚೌಕಟ್ಟಿನ ಮುಖೇನ ಅಭಿವ್ಯಕ್ತವಾಗಿದೆ.

ಈ ಎಲ್ಲಾ ಆಯಾಮಗಳೊಂದಿಗೆ ಬಂಡವಾಳಗಾರ - ಕಾರ್ಮಿಕರ ವೈದೃಶ್ಯ ನೆಲೆಯನ್ನು ಪಡೆಯುವುದರ ಜೊತೆಗೆ ಕಟ್ಟಿಮನಿ ಕತೆಗಳ ವರ್ಗ ವೈರುದ್ಯಗಳ ದಾಖಲೆ ಬಹುಮುಖ್ಯವಾಗಿ ಸಾಗುತ್ತದೆ. ಮಾರ್ಕ್ಸ್‌ವಾದೀ ವಿಚಾರಧಾರೆಯ ಚೌಕಟ್ಟಿನಲ್ಲಿ ಬಂದ ಇಲ್ಲಿನ ಬಂಡವಾಳಗಾರನೊಂದಿಗಿನ ಕಾರ್ಮಿಕನ ಶೀತನ ಸಮರ 'ಉಪ ಸಂಪಾದಕನ ಕುರ್ಚಿ' ಯಲ್ಲಿ ಸಮರ್ಥವಾಗಿ ಬಂದಿದೆ. ಬಂಡವಾಳಗಾರನ ಮೂಲವನ್ನು ಶೋದಿಸುವ ಕೆಲಸ ಇಲ್ಲಿ ಆಗಿದ್ದು ಕಾರ್ಮಿಕನೊಬ್ಬ ಬೆಳೆದು ಸಣ್ಣ ಬಂಡವಾಳದಾರನಾಗಿ, ಜೊತೆಗಾರ ಕಾರ್ಮಿಕರ ಬೆವರಿನಿಂದ ಮತಷ್ಟು ದೊಡ್ಡವನಾಗಿ ನಿರ್ಧಯವಾಗುವ ಸನ್ನೀವೇಶ ಇದ್ದು. ಕಾರ್ಮಿಕರ ಪರದೃಷ್ಟಿ ಲೇಖಕರದಾಗಿದ್ದು, ಬಂಡವಾಳಗಾನರ ಅಮಾನವೀಯತೆಯನ್ನು ಬಿಂಬಿಸುವುದೇ ಕತೆಯ ಗುರಿಯಾಗಿದೆ. ಕಟ್ಟೀಮನಿಯವರು ಗ್ರಹಿಸಿದ ವರ್ಗ ಪ್ರಜ್ಞೆಗೆ ಈ ಕತೆಯ ವಸ್ತು ಮತ್ತೊಂದು ಮಗ್ಗುಲನ್ನು ಜೋಡಿಸಿ ಕೊಟ್ಟಿದೆ. ಈ ಎಲ್ಲಾ ಮಗ್ಗುಲುಗಳು 'ಜೀವನ ಕಲೆ' ಕತೆಯಲ್ಲಿ ವಿಡಂಬನಾತ್ಮಕ ಸ್ವರೂಪ ಪಡೆದಿದ್ದು ಶ್ರೀಮಂತರ ಜೀವನ ಗ್ರಹಿಕೆ ಮತ್ತು ಡಾಂಭೀಕತೆಯನ್ನು ಅನಾವರಣ ಮಾಡಲಾಗಿದೆ. ಜೀವನ ಮತ್ತು ಕಲೆಗಳೆರಡನ್ನು ಬೇರೆ ಮಾಡಿ ನೋಡುವ ಮನಸ್ಸುಗಳು ಬಂಡವಾಳಶಾಹಿ ಸಂಸ್ಕೃತಿಯಲ್ಲಿ ಸಹಜ, ಭಿಕ್ಷುಕನ ಚಿತ್ರವನ್ನು ಕಲಾತ್ಮಕವಾಗಿ ತಯಾರಿಸಿ?ಹೊಟ್ಟೆ ಹೊರೆಯುವ ಮಾರಾಟಗಾರನನ್ನು ಕಟ್ಟಿಮನಿ ಇಂಥಲ್ಲಿ ಮರೆಯುತ್ತಾರೆ.

ಕಟ್ಟೀಮನಿಯವರು ಗ್ರಹಿಸಿದ ವರ್ಗ ತಾರತಮ್ಯ ಮತ್ತು ದಾಖಲಿಸಿದ ವರ್ಗ ವಿಷಮತೆಗಳು ಮೂಲತಃ ಆರ್ಥಿಕ ನೆಲೆಯಿಂದಲೇ ಹೊರಟವಾಗಿವೆ.

ಕಟ್ಟೀಮನಿ ಕತೆಗಳಲ್ಲಿ ಲಿಂಗ ಸಂಬಂಧೀ ನೆಲೆ ವ್ಯಾಪಕವಾಗಿದ್ದು, ಹದಿನೈದಕ್ಕೂ ಹೆಚ್ಚಿನ ಕತೆಗಳಲ್ಲಿ ಇದು ಬಂದಿದೆ, 'ಪರಾಜಿತೆ' ಕತೆಯಲ್ಲಿ ಅತ್ತೆ ಸೊಸೆ ಸಂಬಂಧದ ವೈಮನಸ್ಯ ಚಿತ್ರಣವಿದೆ. ಇಬ್ಬರೂ ಸಂಸಾರದ ಸಹಜಗತಿಯನ್ನು ಅರ್ಥ ಮಾಡಿಕೊಳ್ಳದೇ ಬಳಲುತ್ತಾರೆ. ಮಹಿಳೆ ಯ ಮುಖಾ ಮುಖಿಯ ಇಂಥ ಆಯಾಮವು 'ನೀಲ ಗಂಗಾ ನಾಗರ ಪಂಚಮಿಗೆ ಬಂದದ್ದು' ಕತೆಯಲ್ಲಿ ದುರಂತದ ಅಭಿವ್ಯಕ್ತಿ ಪಡೆಯುತ್ತದೆ. ಗಂಡನ ಮನೆಯ ಹಿಂಸೆ, ಕಿರುಕುಳಗಳು ಸೊಸೆಯ ಸಾವಿಗೆ ಕಾರಣವಾಗುತ್ತದೆ. ಇಲ್ಲಿನ ಲಿಂಗಬಂಧಗಳು ಭಿನ್ನ ಧ್ರುವಗಳಾಗಿದ್ದು, ಆರ್ಥಿಕಾಂಶಗಳನ್ನು ಅವಲಂಬಿಸಿದಂತೆಯೇ ಬೆಳೆಯುತ್ತವೆ. 'ಬರದ ದೇವಿ' ಕತೆಯಲ್ಲಂತೂ ಪರಸ್ಪರ ಸ್ತ್ರೀಯರಿಬ್ಬರ ಮುಖಾಮುಖಿ ಸಾಮಾಜಿಕ ಸ್ಪರ್ಶ ಪಡೆಯುವುದರ ಜೊತೆಗೆ ದ್ವೇಷದ ಸ್ಥಿತಿಗೆ ಬರುತ್ತವೆ. ಸ್ತ್ರೀಯನ್ನು ಸ್ತ್ರೀಯೇ ಅರ್ಥ ಮಾಡಿಕೊಳ್ಳದ ವಿಚಾರವಿದು. ಅನಾಥಳನ್ನು ಆಧರಿಸಿದ ಮಾನವೀಯತೆಯನ್ನೆ ಸಮಾಜದ ಸ್ತ್ರೀ ಬಳಗ ಬರಿದು ಬರಡು ಹೃದಯಿಗಳಾಗುತ್ತಾರೆ. 'ಜೋಳದ ಬೆಳೆಯ ನಡುವೆ' ಮತ್ತು ಗಂಡು ಬೀರಿ ಕತೆಗಳಲ್ಲಿ ದಂಪತಿ

ಸಂಬಂಧ ತಪ್ಪು ಗ್ರಹಿಕೆಗಳು ಪುರುಷನ ನೆಲೆಯಲ್ಲಿ ದಾಖಲಾಗಿದ್ದು ಪರಸ್ಪರ ಅರ್ಥ ಮಾಡಿಕೊಳ್ಳುವ ಮೂಲಕ ಸುಖಾಂತ ಕಂಡರೆ 'ಕುಂಭ ಕರ್ಣ' 'ಸೂರನ ಹಳ್ಳಿಯ ಸಾವಿ ' 'ಮೆರವಣಿಗೆಯ ಹೋರಿ' ಕತೆಗಳಲ್ಲಿ ದುಃಖಾಂತವಾಗುತ್ತದೆ. ಈ ಕತೆಗಳಲ್ಲಿ ದಂಪತಿಗಳ ನಡುವೆ ಅನ್ಯವ್ಯಕ್ತಿ ಪ್ರವೇಶವಿದ್ದು ಸಂಬಂಧಗಳ ಅಸ್ತವ್ಯಸ್ತತೆಗೆ ಅದೇ ಪ್ರಮುಖ ಕಾರಣವಾಗುತ್ತದೆ. 'ಹೂವಿ ಹುಡುಗಿ' ಕತೆಯಲ್ಲಿ ಮಾತ್ರ ದಂಪತಿ ಸಂಬಂಧ ತಪ್ಪುಗ್ರಹಿಕೆಗಳು ಹೆಣ್ಣಿನ ಮೂಲಕ ಅಭಿವ್ಯಕ್ತವಾಗಿದೆ. ಜೊತೆಗೆ ಸುಖಾಂತವಾಗಿದೆ. 'ಎರಡನೆಯ ತಾಯಿ' ಕತೆಯಲ್ಲಿ ಗಂಡು ಹೆಣ್ಣಿನ ಅಕ್ರಮ ಸಂಬಂಧದ ಆಯಾಮದಲ್ಲಿ ದುರಂತವನ್ನು ಹೇಳಲಾಗಿದೆ. ಈ ಅಕ್ರಮ ಸಂಬಂಧದ ಅರಿವಿದ್ದೂ ಅದಕ್ಕೆ ಪ್ರೋತ್ಸಾಹ ಕೊಡುವ ತಾಯಿಯ ಪಾತ್ರವನ್ನೂ ಉದಾರೀಕರಿಸಲಾಗಿದೆ. 'ನಿರಾಶ್ರೀತೆ' ಕತೆಯಲ್ಲಿ ಗೃಹಿಣಿಯೊಬ್ಬಳನ್ನು ಸಮಾಜವೇ ವೇಶ್ಯೆಯಾಗಿಸುತ್ತದೆಂಬ ದನಿಯಿದೆ. ಮತ್ತೊಬ್ಬ ಗಂಡಿನಿಂದಾದ ಅತ್ಯಾಚಾರವನ್ನು ಕೈಹಿಡಿದ ಗಂಡನೇ ಅರ್ಥ ಮಾಡಿಕೊಳ್ಳದೇ ಮಾನವತೆ ತೋರದೆ ಹೆಂಡತಿಯನ್ನು ತಿರಸ್ಕರಿಸುವುದು ಈ ಕತೆಯಲ್ಲಿದ್ದು, ಗಂಡಿನ ಅಹಂನ ಅತ್ಯಂತಿಕ ಉದಾಹರಣೆಯಾಗಿ ಇದು ಕಂಡು ಬರುತ್ತದೆ. ಲಿಂಗ ಸಂಬಂಧದ ಆರೋಗ್ಯವಂತಿಕೆಯನ್ನು ಕಾಪಾಡುವಲ್ಲಿ ಪರಸ್ಪರ ಅರ್ಥೈಸಿಕೊಂಡು ಬದುಕಬೇಕೆಂಬ ನಿಲುವಲ್ಲಿ ಗಂಡಿನ ಪಾತ್ರದ ಪಾಲು ಅಷ್ಟೆಂಬುದನ್ನು ಇಂಥ ಕಡೆ ಕಟ್ಟೀಮನಿಯವರು ಅಭಿವ್ಯಕ್ತಿಸಲು ಪ್ರಯತ್ನಿಸಿದ್ದಾರೆ.

ಹೆಣ್ಣಿನ ಮೋಹವನ್ನು ಕುರಿತಂತೆ ಗಂಡು ಯಾವಾಗಲೂ ಸಡಿಲ ಮನದವನೆಂಬ ತತ್ವವು 'ಮೋಹದ ರಾತ್ರಿ' ಕತೆಯಲ್ಲಿದ್ದು ಲಿಂಗಸಂಬಂಧದ ಆಕರ್ಷಕತೆಯನ್ನು ಪುರುಷ ಪಾತ್ರದ ಮೂಲಕ ಯೋಜಿಸಲಾಗಿದೆ. ಇಲ್ಲಿ ಗಂಡಿನ ಸಡಿಲಮನದ ಅನಾವರಣವಿದೆಯೇ ಹೊರತು ಹೆಣ್ಣಿನದಲ್ಲ. ಆ ಮಟ್ಟಿಗೆ ಲೇಖಕನ ಪೂರ್ವನಿಯೋಜಿತ ಸ್ಥಿತಿಯಲ್ಲಿದ್ದಾನೆ. ಆದರೆ ರೂಪದ್ವೇಷಿ ಕತೆಯಲ್ಲಿ ಹೆಣ್ಣಿನ ಸಡಿಲಮನವನ್ನು ಹೇಳುವುದರ ಮೂಲಕ ಕಟ್ಟೀಮನಿಯವರು ಗಂಡು ಮತ್ತು ಹೆಣ್ಣಿನ ಕಾಮ ಸಂಬಂಧದ ಸ್ವಭಾವ ವೈರುಧ್ಯಗಳನ್ನು ದಾಖಲಿಸುವಲ್ಲಿ ನಿಷ್ಪಕ್ಷಪಾತವಾದ ಪಾತ್ರ ವಹಿಸುತ್ತಾರೆ. ಇಲ್ಲಿನ ಗಂಡು ಹೆಣ್ಣಿನ ಸಂಬಂಧದ ನೆಲೆಗಳು ಅನರ್ಥಕಾರಿ ನಡೆಗಳ ಮೂಲಕ ಚಿತ್ರಿತವಾಗಿದೆ. 'ಅಜ್ಞಾತವಾಸಿ' ಕತೆಯಲ್ಲಿ ದೇಶದ ಸ್ವಾತಂತ್ರ್ಯಕ್ಕಾಗಿ ಮತ್ತು ಗಂಡನ ಪ್ರಾಣರಕ್ಷಣೆಗಾಗಿ ಹೆಂಡತಿಯಾದವಳು ತನಗಾದ ದೌರ್ಜನ್ಯ ಅತ್ಯಾಚಾರಗಳನ್ನೂ ತಾಳಿಕೊಳ್ಳುತ್ತಾಳೆಂಬ ದನಿಯಿದೆ. ದೇಶಪ್ರೇಮದಂಥ ರಾಷ್ಟ್ರೀಯಭಾವನೆಯ ವಿಷಯದಲ್ಲಿ ದಂಪತಿಗಳು ಸಮಾನ ಮನಸ್ಸರೆಂಬ ಅಂಶದ ಅನಾವರಣದಿಂದ ಈ ಕತೆಯ ಲಿಂಗಸಂಬಂಧ ಸ್ವರೂಪವು ವ್ಯಕ್ತಗೊಳ್ಳುತ್ತದೆ.

ಕಟ್ಟೀಮನಿಯವರ ಕತೆಗಳಲ್ಲಿ ವ್ಯಕ್ತವಾಗಿರುವ ಲಿಂಗಸಂಬಂಧದ ವಿಚಾರಗಳು ಕುಟುಂಬದ ಚೌಕಟ್ಟಿನಲ್ಲಷ್ಟೆ ಅಭಿವ್ಯಕ್ತವಾಗಿದೆ. 'ಗುಲಾಬಿ ಹೂ' ಕತೆಯಲ್ಲಿ ಬರುವ ಹೆಣ್ಣು ತನ್ನ ಗಂಡನಿಗೆ ಎರಡನೇಯ ಹೆಂಡತಿಯಾಗಿ ಬಂದರೂ, ಆ ಬಗೆಗಿನ ಹಳಹಳಿಕೆಯನ್ನು ತೋರಿಸದೇ ಗಂಡನ ಮನಸ್ಸನ್ನು ನೋಯಿಸಿದ ಕಾರಣವಾಗಿ ಪಶ್ಚಾತಾಪ

ಪಡುತ್ತಾಳೆ. ಇಂಥಲ್ಲೆಲ್ಲ ಕಟ್ಟೀಮನಿಯವರ ಲೇಖನಿ ಪುರುಷಪಾತ್ರಗಳನ್ನು ಕೇಂದ್ರವಾಗಿಟ್ಟು ಕೊಂಡಿರುತ್ತದೆ. ನಿರಂಜನ ಮತ್ತು ಚದುರಂಗರಲ್ಲಿ ಕಾಣಿಸುವ ಸ್ತ್ರೀ ಪಾತ್ರದ ಹಲವು ಸಾಧ್ಯತೆಗಳಾಗಲಿ ಪುರುಷ ವ್ಯವಸ್ಥೆಯನ್ನು ಪ್ರಶ್ನಿಸಿ ಧಿಕ್ಕರಿಸಿ ಬದುಕುವ ಸ್ತ್ರೀ ಪ್ರತೀಕಗಳಾಗಲೀ ಇವರಲ್ಲಿ ಕಂಡು ಬರದು.

ನಿರಂಜನರ ಕತೆಗಳು ಮಾರ್ಕ್ಸ್‌ವಾದೀ ಸಿದ್ಧಾಂತದ ನೆಲೆಯಲ್ಲಿ ರೂಪುಗೊಂಡವುಗಳಾಗಿವೆ. ಹೀಗಾಗಿ ಇವರ ಕತೆಗಳ ಪೈಕಿ ಸುಮಾರು ಇಪ್ಪತ್ತಕ್ಕೂ ಹೆಚ್ಚಿನಲ್ಲಿ ವರ್ಗ ಸಂಬಂಧೀ ನಲೆಗಳ ಅನಾವರಣವಿದೆ ಮತ್ತು ಶೋಧವಿದೆ.

ನಿರಂಜನರು ಬಡತನ ಹಸಿವುಗಳನ್ನು ಕುರಿತಂತೆಯೇ 'ಅವರು' "ಬಾಳಿನೇಳ್ಗೆ" 'ಡಿಸೆಂಬರ್ ೧೯' ಮೊದಲಾದ ಕತೆಗಳಲ್ಲಿ ವಿವರವಾಗಿ ಚಿತ್ರಿಸಿದ್ದು, 'ಅವರು ' ಕತೆಯು ಬಡತನದ ಕಡುಕಷ್ಟಗಳನ್ನು ನೋವುಗಳನ್ನು ಅತ್ಯಂತ ನಿರ್ಲಿಪ್ತ ಧಾಟಿಯಲ್ಲಿ ಹಿಡಿದಿಟ್ಟಿದೆ. ಯಾವುದೇ ಪೂರ್ವ ಗ್ರಹಗಳನ್ನು ತಂದು ತುರುಕದೇ ಬಡತನವನ್ನು ಅನುಭವಿಸಬೇಕಾದ ಅನಿವಾರ್ಯವನ್ನು ತೀರಾ ಸಹಜವಾಗಿ, ಆದರೆ ವಿಷಾದದ ದನಿಯಲ್ಲಿ

ಅಭಿವ್ಯಕ್ತಸಲಾಗಿದೆ ಮತ್ತು ಬಡವರಿಗೆ ಬಡವರೇ ದಿಕ್ಕು ಎಂಬುದು ಸ್ಪಷ್ಟವಾಗಿದೆ. ಬಾಳಿನೇಳ್ಗೆಯತೆಯಲ್ಲಿ ಇಂಥ ಬಡತನಗಳಿಂದ ಮುಕ್ತಗೊಂಡು ಬದುಕಿನಲ್ಲಿ ಏಳಿಗೆ ಕಂಡ ಬಗೆಯನ್ನು ವಿವರಿಸಲಾಗಿದೆ. ಶ್ರೀಮಂತರಾದರೂ ಮಾನವೀಯ ಹೃದಯವುಳ್ಳ ವ್ಯಕ್ತಿಗಳಿಂದ ಇಂತಹ ಏಳ್ಗೆ ಸಾಧ್ಯವಾಯಿತೆಂಬ ಅಂಶ ಕತೆಯಲ್ಲಿ ಬರುತ್ತದೆ. ಅಂದರೆ ನಿರಂಜನರು ಬಡವ ಶ್ರೀಮಂತ ಚೌಕಟ್ಟಿನ ಕಪ್ಪು ಬಿಳುಪಿನ ಚಿತ್ರಣವನ್ನೇಷ್ಟೇ ಕೊಟ್ಟವರಲ್ಲ. ಕಲಾವಿದನೊಬ್ಬ ಬಡತನದ ಸಂಕಷ್ಟವನ್ನು ಅನುಭವಿಸುತ್ತಿದ್ದರೂ ಬಂಡವಾಳಶಾಹಿ ಮನಸ್ಸುಗಳಿಗೆ ತನ್ನ ಕಲೆಯನ್ನು ಮಾರಿಕೊಳ್ಳದ ಚಿತ್ರಣ ಡಿಸೆಂಬರ್ ೧೯ ಎಂಬ ಕತೆಯಲ್ಲಿದೆ. ಬಡತನ ಮತ್ತು ಹಸಿವುಗಳ ಭೀಕರತೆ 'ಕಾಮಶಿಶು'ಕತೆಗಳಲ್ಲಿ ಮುಗಿಲು ಮುಟ್ಟಿದೆ. ಬರಗಾಲದ ಕಾರಣವಾಗಿ ಹೆತ್ತ ಮಕ್ಕಳನ್ನು ಮತ್ತೊಬ್ಬರಿಗೆ ಒಪ್ಪಿಸುವ ತಂದೆತಾಯಿಗಳ ಕರುಳಿನ ಆರ್ದ್ರತೆ ಈ ಕತೆಯಲ್ಲಿದೆ. 'ಮೂರು ದುಡ್ಡು'ಕತೆಯಲ್ಲಿ ಬಡವೆಯನ್ನು ಶ್ರೀಮಂತ ಶೋಷಿಸುವ ಚಿತ್ರವಿದೆ. ಬಡವರನ್ನು ಹಿಂಸಿಸಿ ಶೋಷಿಸಲು ಶ್ರೀಮಂತರಿಗೆ ನಿರ್ದಿಷ್ಟ ಕಾರಣವೇ ಬೇಕಾಗಿಲ್ಲವೆಂದು ಇದು ಹೇಳುತ್ತದೆ. 'ನೀಮಾ ನೀಮಾ' ಮತ್ತು 'ಮೈಬೆಲ್‌ಮಾಸ್ ಪಿಕ್‌ನಿಕ್ ' ಕತೆಗಳು. ಮೇಲ್ವರ್ಗ ಮತ್ತು ಕೆಳವರ್ಗಗಳ ವೈದೃಶ್ಯದ ಅಡಿಯಲ್ಲಿ ಬಂದವುಗಳಾಗಿದ್ದು, ಎರಡೂ ವರ್ಗದ ಮನಸ್ಸುಗಳ ವರ್ತನೆಯನ್ನು ದಾಖಲಿಸಲಾಗಿದೆ. ನೀಮಾ ಕತೆಯು ದುರಂತವಾದರೂ ಸಹ ಈ ಕತೆಯಲ್ಲಿನ ಕೆಳಜನತೆಯ ಪರವಾದ ಲೇಖಕನ ದನಿ ಹೆಚ್ಚು ಗಟ್ಟಿಯಾಗಿದೆ. ಪಾತ್ರಗಳು ಘರ್ಷಣೆಯ ಮಟ್ಟದಲ್ಲೇ ನಿಲ್ಲದೇ ಕ್ರಿಯಾತ್ಮಕ ಮಜಲುಗಳನ್ನು ತಡೆಯುತ್ತವೆ. 'ಮಹಾದೇವನ ಮಣಿಮಕುಟ'ಕತೆಯು ಮೇಲ್ವರ್ಗದ ಜನತೆಯ ನೀಚತನ, ಕಳ್ಳತನಗಳನ್ನು ಅನಾವರಣ ಮಾಡಿದೆ. ವರ್ಗ ಅಸಮಾನತೆಗಳ ಕಾರಣವಾಗಿ ಕೆಳವರ್ಗದ ಜನರು ಏನೆಲ್ಲ ಸುಳ್ಳು, ಆಪಾದನೆಗಳನ್ನು ಹೊತ್ತು ವಿನಾ ಕಾರಣ ಅಪರಾಧಿಗಳಾಗಿ ಬದುಕಬೇಕಾದ ದುರಂತವನ್ನು ಇದು ಹೇಳುತ್ತದೆ. ಮೇಲ್ವರ್ಗದವರ

ಬದುಕಿಗಾಗಿ ಇವರ ಜೀವನವೇ ಸರ್ವನಾಶವಾಗುತ್ತದೆ. ಉಳ್ಳವರಿಗೆ ಲಭಿಸುವ ಸ್ಥಾನಮಾನಗಳಲ್ಲಿ ಇಂತಹ ಅಯೋಗ್ಯತನದಿಂದಲೇ ಕೂಡಿದೆ ಎಂಬುದು ಕತೆಯ ದನಿ. ಈ ಸಾಧಾರಣೀಕರಣವು 'ಅವನ ಆಸೆ'ಕತೆಯಲ್ಲಿ ವಿಪರೀತವಾಗುತ್ತದೆ. ಜಗತ್ತಿನ ಎಲ್ಲ ಶ್ರೀಮಂತರನ್ನು ದ್ವೇಷಿಸುವ ಇಲ್ಲಿನ ಕಥಾನಾಯಕ ಸಿನಿಕನಾಗಿ ಬಿಟ್ಟಿದ್ದಾನೆ. ನಿರಂಜನರು ಗ್ರಹಿಸುವ ವರ್ಗದ ಆಶಯಗಳು ಇಂಥಲ್ಲಿ ಅತಿರೇಕವಾಗಿಬಿಟ್ಟಿದೆ. ಇದೇ ನಿಟ್ಟಿನಲ್ಲಿ ಗಮನಿಸಬೇಕಾದ ಮತ್ತೊಂದು ಕತೆಯಿದೆ. 'ಯಾವುದು' ಮಾನವೀಯತೆ ತೋರಬೇಕಾದ ವೈದ್ಯನು ಧನಪಿಶಾಚಿಯಾಗಿ ಉಳ್ಳದವನನ್ನು ತಾತ್ಸಾರವಾಗಿ ನೋಡುತ್ತಾನೆ. ಇಂತಹ ವೈದ್ಯನು ವ್ಯಕ್ತಿಗಳ ಆರೋಗ್ಯಕ್ಕೆ ಮುಳ್ಳಾಗುವುದಲ್ಲದೇ ಸಾಮಾಜಿಕ ಆರೋಗ್ಯವನ್ನೂ ಹದಗೆಡಿಸುವ ರೋಗಿಷ್ಟನೆಂಬುದು ಈ ಕತೆಯ ದನಿ.

ನಿರಂಜನರ ವರ್ಗ ನೆಲೆಯ ಕಾರ್ಮಿಕ. ಬಂಡವಾಳಗಾರನ ಸಂದರ್ಭಗಳನ್ನು ಲಕ್ಷ್ಯಕ್ಕೆ ತೆಗೆದುಕೊಳ್ಳುವುದರ ಮೂಲಕ ವರ್ಗ ಸಂಬಂಧಗಳನ್ನು ಹೆಚ್ಚು ವ್ಯಾಪಕವಾಗಿ ನೋಡಲು ಪ್ರಯತ್ನಿಸಿದೆ. 'ಇರುಳ ಛಾಯೆ', 'ಕರುಳಿನ ಕೂಗು', 'ಮೋಡ ಚೆದುರಿತು'ಕತೆಗಳಲ್ಲಿ ಈ ನೀತಿಗಳು ಮುಖಾಮುಖಿ ಇದೆ.

ಕತೆಗಳಲ್ಲಿ ಈ ನೆಲೆಗಳ ಮುಖಾಮುಖಿಯಿದೆ. ಬಂಡವಾಳಗಾರರ ವಿರುದ್ಧ ನಡೆಯುವ ಕಾರ್ಮಿಕರ ಮುಷ್ಕರ 'ಮೋಡ ಚೆದುರಿತು' ಕತೆಯಲ್ಲಿ ಸೋಲು ಕಂಡರೂ ಆ ಸೋಲಿಗಿರುವ ಕಾರಣಗಳನ್ನು ಕತೆ ತನ್ನ ನಡಾವಳಿಕೆಯ ಪಾರ್ಶ್ವದಲ್ಲೇ ಕಟ್ಟಿಕೊಡುತ್ತ ಸಾಗುತ್ತದೆ. 'ಕರುಳಿನ ಕೂಗು' ಕತೆಯಲ್ಲಿ ಬಂಡವಾಳಶಾಹಿ ಸಂಸ್ಕೃತಿ ನಡೆಸುವ ಘೋರ ದುರಂತ ಚಿತ್ರವಿದೆ. ಶಾಂತಿ ಕಾಪಾಡಲೆಂದು ಹಾರಿಸುವ ಗುಂಡು ದುಡಿದು ತಿನ್ನುವ ಬಡ ಕಾರ್ಮಿಕನನ್ನು ಬಲಿ ತೆಗೆದುಕೊಳ್ಳುತ್ತದೆ. ಆದರೆ ಇರುಳ ಛಾಯೆಯಲ್ಲಿ ವರ್ಗ ಸಂಬಂಧೀ ತಾರತಮ್ಯಗಳು ನಿರೂಪಿತಗೊಳುವ ರೀತಿ ಹೊಸದಾಗಿದೆ. ಇದುವರೆಗಿನ ಕತೆಗಳಲ್ಲಿ ನಿರೂಪಕನು ನೋವುಂಡವರ ಪರ ನಿಂತು ಮಾತಾಡುವುದನ್ನು ಕಂಡರೆ ಈ ಕತೆಯಲ್ಲಿ ಬಂಡವಾಳಗಾರನ ನೆಲೆಯಲ್ಲಿ ನಿಂತು ದಲಿತ ಪರವಾಗಿ ನೋಡುವ ಚಿತ್ರವಿದೆ. ಇದರಿಂದ ಬಂಡವಾಳಗಾರನ ಸಣ್ಣತನ ಮತ್ತು ಸ್ವಾರ್ಥಗಳೂ ಕಾರ್ಮಿಕರ ದುಃಖದುಮ್ಮಾನಗಳು ಏಕಕಾಲದಲ್ಲಿ ಅನಾವರಣಗೊಂಡಿವೆ. ನಿರಂಜನರ ವರ್ಗ ಪ್ರಜ್ಞೆಗೆ ಇದೊಂದು ಹೊಸ ಸೇರ್ಪಡೆ.

ನಿರಂಜನರ ಕತೆಗಳಲ್ಲಿ ಬರುವ ವರ್ಗ ಸಂಘರ್ಷವು ಸಾಮಾಜಿಕ ನ್ಯಾಯ ಪ್ರತಿಪಾದನೆಗಾಗಿ ಬಂದದ್ದು. 'ಇಬ್ಬರು ಗಂಡರು', 'ನಾಲ್ವರು ಯೋಧರು', 'ಮೈನಾಭವನದ ಮಲ್ಲಯ್ಯ', 'ಧ್ವನಿ' ಮೊದಲಾದ ಕತೆಗಳಲ್ಲಿ ಬರುವ ಹೋರಾಟ ಚಿತ್ರಣವು ಸಮೂಹದ ಹಿತಾಸಕ್ತಿಯನ್ನು ಅವಲಂಬಿಸಿದ್ದು, ಆ ಮುಖೇನ ವ್ಯವಸ್ಥೆಯ ದಬ್ಬಾಳಿಕೆಯನ್ನು ದಾಖಲಿಸುತ್ತವೆ. ಈ ಕತೆಗಳು ತ್ಯಾಗ, ಬಲಿದಾನಗಳ ಉಲ್ಲೇಖವಾಗಿ ಹೋರಾಟವು ಆತ್ಮಾರ್ಪಣೆಯ ಹಾದಿ ಹಿಡಿಯುತ್ತಾದರೂ ಹೋರಾಟದ ಧ್ಯೇಯವು ವರ್ಗ ಅಸಮಾನತೆಯನ್ನು ತೊಡೆದು ಹಾಕುವುದೇ ಆಗಿದೆ. "ಧ್ವನಿ ಮತ್ತು ಬಯಸದ ದೃಷ್ಟಿ' ಕತೆಗಳಿಂದಲೂ ವರ್ಗ ಪ್ರಜ್ಞೆ ದುರಂತ ವ್ಯಂಗ್ಯದ ಚೌಕಟ್ಟಿನಲ್ಲಿದೆ. ಆದರೆ ಎರಡೂ ಕತೆಗಳಲ್ಲಿ ಇದು ಅಭಿವ್ಯಕ್ತವಾದ ಬಗೆ ಭಿನ್ನ ತೆರನಾದ್ದು ನೋವುಂಡವರ ಕ್ರಿಯಾಶಾಲೆ ಚೇತನ ಸಜೀವಗೊಂಡು

ಬಂಡಾಯವೇಳುವ ರೀತಿ ಧ್ವನಿಕತೆಯಲ್ಲಿದ್ದು, ಕನ್ನಡ ಸಾಹಿತ್ಯದಲ್ಲೇ ವಿಶಿಷ್ಟವಾದದ್ದು.

'ಬಯಸದ ದೃಷ್ಟಿ' ಕತೆಯಲ್ಲಿನ ವಿಪರ್ಯಾಸ ಸಾಮಾಜಿಕ ಪ್ರಜ್ಞೆಯನ್ನು ತಳುಕು ಹಾಕಿಕೊಂಡಿದೆ. ಇಲ್ಲಿಯ ಭಿಕ್ಷುಕನ ಮೂರ್ಖತನ ಸಮಾಜದ ಸ್ಥಿತಿಯನ್ನು ಸಂಕೇತಿಸುತ್ತದೆ. ಆಶಾವಾದಿ ನಿರಂಜನ ಇಂತಹ ಕಥೆಯನ್ನೂ ಬರೆದಿದ್ದಾರೆಂಬುದೇ ಆಶ್ಚರ್ಯದ ಸಂಗತಿ. ನಿರಂಜನ ಮೂರ್‍ನಾಲ್ಕು ಕತೆಗಳಲ್ಲಷ್ಟೇ ಜಾತಿ ವಾಸ್ತವಗಳ ಅನಾಹುತಗಳಿವೆ. ಈ ಕತೆಗಳಲ್ಲಿ ಜಾತಿ ಆಧಾರಿತ ಸಮಾಜದ ಕೊಳಕುಗಳನ್ನು ಎತ್ತಿ ತೋರಿಸಲಾಗಿದೆ. ಜಾತಿ ಜನರ ಕ್ಷುಲ್ಲಕತನ ಮತ್ತು ಜಾತಿ ಮೀರುವ ದೊಡ್ಡತನ. ಈ ವಿಚಾರವು ಒಂದು ನಮೂನೆಯ ಹುಡುಗ... ಕತೆಯಲ್ಲಿ ಬಂದಿದ್ದು, ಇಡೀ ಪ್ರಸಂಗ ಅಂತ್ಯದಲ್ಲಿ ಮಾನವೀಕರಣಗೊಳ್ಳುತ್ತದೆ. ಜಾತಿ ಕಾರಣಕ್ಕಾಗಿ ಸಮೂಹದಿಂದ ನೋವುಣ್ಣುವ ಬಾಲಕನು ಕ್ರಮೇಣ ಆತ್ಮವಿಶ್ವಾಸ ಬೆಳೆಸಿಕೊಂಡು ಜಾತಿ ವರ್ಗಗಳನ್ನು ಮೀರಿ ಕೇವಲ ಮನುಷ್ಯನಾಗಿ ಬದುಕಲು ಪ್ರಯತ್ನಿಸುವ ಚಿತ್ರ 'ಉಗುಳು ನುಂಗು' ಕತೆಯಲ್ಲಿದೆ. 'ಸರೋಜಿಗೆ ಬರೆದ ಕಾಗದಗಳು' ಕತೆಯಲ್ಲಿ ಮತೀಯ ಸಂಕುಚಿತತೆ ದಾಖಲಾಗಿದ್ದು, ಧರ್ಮಾಂಧತೆಯ ಅಪಾಯಗಳನ್ನು ಹೇಳಲಾಗಿದೆ. ಹಿಂದೂ ಸಮಾಜದ ಶ್ರೇಣಿಕೃತ ಜಾತಿ ಪದ್ಧತಿಯ ಕರಾಳ ಮುಷ್ಟಿಗೆ ಸಿಲುಕಿದ ಜನಗಳು ನಿಷ್ಕಾರಣವಾಗಿ ಪಡುವ ಹಿಂಸೆಯು ದೇಗುಲದಲ್ಲಿ ಪಾದರಕ್ಷೆ ಕತೆಯಲ್ಲಿದೆ. 'ಕೊನೆಗೂ' ಎಂಬ ಕತೆ ವರ್ಣ ಸಂಘರ್ಷವನ್ನು ಹೇಳುತ್ತದೆ. ಹೊರದೇಶಗಳಲ್ಲಿ ಮೈ ಬಣ್ಣವನ್ನು ಕುರಿತಂತೆ ಕಾಡುವ ಆಲೋಚನೆಗಳು ಎಂಥವೆಂಬುದನ್ನು ವ್ಯಕ್ತಿ ನೆಲೆಯಲ್ಲಿ ಪ್ರಕಾಶಪಡಿಸಲಾಗಿದೆ. ವರ್ಣಭೇದ ನೀತಿಯ ವಿರುದ್ಧ ಹೋರಾಟ ಮತ್ತು ದೇಶಪ್ರೇಮಗಳು ಜೊತೆಗೂಡಿ ಭಾವುಕವಾಗಿದೆ.

ನಿರಂಜನರ ಸುಮಾರು ಮೂವತ್ತಕ್ಕೂ ಹೆಚ್ಚಿನ ಕತೆಗಳು ಲಿಂಗ ಸಂಬಂಧದ ನೆಲೆಗಳ ಶೋಧನೆಯನ್ನು ಮುಖ್ಯ ಭೂಮಿಕೆಯನ್ನಾಗಿಟ್ಟುಕೊಂಡಿದೆ. 'ಸುಮಂಗಲಿ ಶಿರಿನ್',' ಪ್ರೇಮಾರ್ಪಣೆ', 'ಮೋಹ ಜಾಲ', 'ನಾಳೆಯ ಹಂಬಲ', 'ನಾಲ್ಕು ದಿನಗಳು'ಮೊದಲಾದ ಕತೆಗಳಲ್ಲಿ ಗಂಡುಹೆಣ್ಣಿನ ಸಂಬಂಧವು ವೈವಾಹಿಕ ಚೌಕಟ್ಟಿನ ಏರಿಳಿತಗಳನ್ನು ಅವಲಂಬಿಸಿದಂತೆ ಬಂದಿದೆ. ಪ್ರೇಮಾರ್ಪಣೆಯು ತ್ರಿಕೋನ ಪ್ರೇಮದ ಕತೆ. ತಂಗಿಯ ಸುಖಕ್ಕಾಗಿ ಅಕ್ಕನ ತ್ಯಾಗ ಅನಿವಾರ್ಯವಾಗುತ್ತದೆ. ಆದರೆ 'ಸುಮಂಗಲೆ ಶಿರಿನ್' ಕತೆಯಲ್ಲಿ ಪ್ರೇಮಿಗಳ ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಾರೆ. 'ಮೋಹಜಾಲ ಕತೆಯ ಹೆಣ್ಣಿನ ಆಯಾಮವು ಎರಡು ತೆರನಾಗಿದೆ; ಕೈ ಹಿಡಿದ ಹೆಂಡತಿಯ ವ್ಯಸನ ಮತ್ತು ಹಣಕ್ಕಾಗಿ ಪ್ರೀತಿಯ ನಟನೆ ಮಾಡುವ ಲಲನೆ. 'ಎರಡು ವರುಷ'ಕತೆಯಲ್ಲಿ ಸಫಲ ದಾಂಪತ್ಯವಿದ್ದರೆ, ನಾಳೆಯ ಹಂಬಲ ಕತೆಯ ನಾಯಕನು ಪ್ರೇಮವಿವಾಹಕ್ಕೆ ದೂರಾದ ಮನೆಯವರ ಅಡ್ಡಿಗಳನ್ನು ಎದುರಿಸಲು ಸೋಲುತ್ತಾನೆ. ಬೆಳೆದು ಬಂದ ಸಂಬಂಧದಲ್ಲಿನ ಗಂಡುಹೆಣ್ಣಿನ ಪ್ರೇಮ ಆರೋಗ್ಯಕರ ಮತ್ತು ಆಶಾವಾದಿ ನಿಲುವುಗಳಿಂದ ಕೂಡಿದೆ. 'ಸಮಪಾಲು' ಕತೆಯಲ್ಲಿ ಶಾಸ್ತ್ರದ ನೆಪದಲ್ಲಿ ಗಂಡಸು ಹೆಂಗಸನ್ನು ಶೋಷಿಸುವುದರ ಉಲ್ಲೇಖವಿದೆ.

ನಿರಂಜನರ ಕತೆಗಳ ಲಿಂಗಪ್ರಜ್ಞೆಯು ಗಂಡು ಹೆಣ್ಣಿನ ಪ್ರೀತಿ ಪೂರ್ಣ ಸಂಬಂಧಗಳ ಉಬ್ಬರವಿಳಿತಗಳನ್ನು ಚಿತ್ರಿಸುವುದರ ಜೊತೆಗೆ ಸಮಾಜದಿಂದ ಹೆಣ್ಣಿಗೆ ಒದಗುವ ಸಂಕಷ್ಟಗಳನ್ನೂ ಗಣನೆಗೆ ತೆಗೆದುಕೊಳ್ಳುತ್ತದೆ. ವಿಧವೆಯನ್ನು ಶೋಷಿಸುವ ಚಿತ್ರ 'ಬಹಿಷ್ಕೃತೆ' ಮತ್ತು 'ಒಂದು ಹಿಡಿ ಹುಲ್ಲು' ಕತೆಗಳಿವೆ. ಈ ಕತೆಗಳಲ್ಲಿ ಸ್ತ್ರೀಯಾದವಳು ಸಾಮಾಜಿಕ ದಿಗ್ಬಂದನಗಳಿಂದ ಅಂತ್ಯ ಕಂಡರೆ ಆ ಜೀವನ ಕತೆಯಲ್ಲಿ ಬಾಲವಿಧವೆಯ ವ್ಯವಸ್ಥೆಯನ್ನು ವಿರೋಧಿಸಿ ಬದುಕುವ ಸಮರ್ಥ ಜೀವನ ನಿರ್ವಹಣೆ, ಸಾಧನೆಯನ್ನು ಕಾಣಬಹುದಾಗಿದೆ. 'ಬಹಿಷ್ಕೃತೆ' ಕತೆಯಲ್ಲಿ ಗರ್ಭಿಣಿ ವಿಧವೆಯನ್ನು ಮೇಲ್ವರ್ಗದ ಪುರುಷ ಸಮಾಜ ತನ್ನ ಸ್ವಾರ್ಥಕ್ಕಾಗಿ ಬಳಸಿಕೊಳ್ಳಲು ವಿಫಲವಾಗುತ್ತದೆ. ಆದರೆ ರತಿಯ ಓಲೆಯಲ್ಲಿ ತನ್ನ ತವರು ಮತ್ತು ಗಂಡನ ಮನೆಗಳೆರಡರಲ್ಲೂ ಅನುಭವಿಸುವ ಹೆಣ್ಣಿನ ಕಷ್ಟ ಪರಂಪರೆ ಅರಣ್ಯರೋಧನವಾಗುತ್ತದೆ. ಇಂತಹ ಶೋಷಣೆಯು ಹೆಣ್ಣಿನ ಮುಗ್ಧತೆ, ಮೂರ್ಖತೆಗಳಿಂದಲೂ ಒದಗುತ್ತದೆಂಬುದಕ್ಕೆ 'ಹಾಲವ್ವ', 'ಕಟ್ಟಿದ ಎಮ್ಮೆ'ಯಂತಹ ಕತೆ ಸಾಕ್ಷಿಯಾಗುತ್ತದೆ. ಆದರೆ ನಿರಂಜನರ ಲಿಂಗಪ್ರಜ್ಞೆ ಏಕಮುಖವಾದದ್ದಲ್ಲ. 'ಹೊಸತು 'ಕತೆಯಲ್ಲಿ ಒಂದು ಮಗುವಿರುವ ವಿಧವೆಯ ಮರು ವಿವಾಹ ನಡೆಯುತ್ತದೆ. ಹೊಸ ಸಮಾಜ ನಿರ್ಮಾಣದ ಕನಸು ಹೊತ್ತ ಸಮಾನ ಮನಸ್ಕರು ಈ ಕತೆಯಲ್ಲಿ ನಡೆದುಕೊಳ್ಳುವ ರೀತಿ ಅಖಂಡತೆಯ ನೆಲೆಯಿಂದ ಕೂಡಿದ್ದಾಗಿದೆ.

ಇಂತಹ ಶೋಷಣೆಗಳ ಮತ್ತೊಂದು ರೂಪವಾಗಿ ಹೆಣ್ಣಾದವಳು ವೇಶ್ಯೆಯಾಗಿ ಅನುಭವಿಸುವ ರೋದನಗಳು ಕಂಡುಬಂದು 'ಅವಳಿಗೆ ಗೊತ್ತಿರಲಿಲ್ಲ','ಕೊನೆಯ ಗಿರಾಕಿ', 'ಬದುಕುವ ಬಯಕೆ'ಮೊದಲಾದ ಕತೆಗಳಲ್ಲಿ ಇದುವೇ ಪ್ರಮುಖ ಕೇಂದ್ರವಾಗಿದೆ. 'ಯಾವ ಹೋರಾಟ' ಮತ್ತು 'ಅವಳಿಗೆ ಗೊತ್ತಿರಲಿಲ್ಲ' ಕತೆಗಳಲ್ಲಿ ಹೆಣ್ಣು ತನ್ನ ವಯೋ ಸಹಜ ಕಾಮನೆಗಳಿಗಾಗಿ ವೇಶ್ಯೆಯಾಗುತ್ತಾಳೆ. ಉಳಿದ ಕತೆಗಳಲ್ಲಿ ಹೆಣ್ಣು ವೇಶ್ಯೆಯಾಗಲು ಹಸಿವು, ಬಡತನಗಳೇ ಪ್ರಮುಖ ಕಾರಣಗಳಾಗುತ್ತವೆ. ಸಮಾಜದಲ್ಲಿ ಸನ್ನಡತೆಯ ಬದುಕು ನಡೆಸಿದರೂ ಅಪವಾದಗಳನ್ನು ಹೊತ್ತುಕೊಳ್ಳಬೇಕಾದ ಅನಿವಾರ್ಯತೆಯು ಹೆಣ್ಣಿಗೆ ಒದಗುವ ಬಗೆಯನ್ನು 'ನಮ್ಮೂರ ಸೂಲಗಿತ್ತಿ'ಕತೆಯಲ್ಲಿ ಹೇಳಲಾಗಿದೆ. 'ಸಂಧ್ಯಾಕಾಲ' ಕತೆಯಲ್ಲಿ ಗಂಡುಹೆಣ್ಣಿನ ಸಂಬಂಧ ಸ್ವಾತಂತ್ರ್ಯ ಹೋರಾಟದ ಆಶಯಗಳೊಂದಿಗೆ ಮಿಳಿತಗೊಂಡಿದೆ. ಇಲ್ಲಿನ ಪುರುಷ ಮಹಿಳೆಯ ದಾಂಪತ್ಯ ಚೌಕಟ್ಟಿನ ಸಂಬಂಧಗಳು ಪೂರಕವಾಗಿಯೇ ಹೊರತು, ಸಂಘರ್ಷದ ಹಾದಿ ಹಿಡಿಯುವುದಿಲ್ಲ. ನಿರಂಜನರ ಕತೆಗಳಲ್ಲಿ ಅಭಿವ್ಯಕ್ತವಾದ ಲಿಂಗಪ್ರಜ್ಞೆ ಕೇವಲ ಲಿಂಗವರ್ಗೀಕರಣವನ್ನಷ್ಟೇ ಆಧರಿಸಿದ್ದಲ್ಲ. 'ಘಂಟೆ' ಕತೆಯಲ್ಲಿ ಸ್ತ್ರೀ ಮತ್ತು ಸ್ತ್ರೀ ಮುಖಾಮುಖಿಯನ್ನು ವರ್ಗ ಮತ್ತು ಲಿಂಗ ಪ್ರಜ್ಞೆಗಳೆರಡರ ಚೌಕಟ್ಟಿನಲ್ಲೂ ಸಂಯೋಜಿಸಲಾಗಿದೆ. ಈ ಕತೆಯಲ್ಲಿ ರೇಖಾ ಮಾತ್ರವಾಗಿ ಬರುವ ಪಾತ್ರದ ಪುರುಷ ಅಹಂ ಮತ್ತು ದೌರ್ಜನ್ಯಗಳು ಇಡೀ ಕತೆಯನ್ನು ನಿಯಂತ್ರಿಸುತ್ತದೆ. ಮಾನವೀಯತೆ ಮತ್ತು ಬದುಕಬೇಕಾದ ಅನಿವಾರ್ಯತೆ ಇವುಗಳ ವೈದೃಶ್ಯದಲ್ಲಿ ಹೆಣ್ಣಿನ ಅಂತರಂಗವನ್ನು ತೆರೆದು ತೋರಲಾಗಿದೆ. ಇಷ್ಟೆಲ್ಲದರ ಜೊತೆಗೆ ಸ್ತ್ರೀ ವಿಕಸನ ಸಾಧ್ಯತೆಗಳನ್ನು ಸ್ತ್ರೀ-ಪುರುಷ ಸಮಾನತೆಯನ್ನು ಸ್ಥಾಪಿಸುವ ಕತೆಗಳಿವೆ. 'ಬೆಳಕು ಹರಿಯಿತು' ಮತ್ತು 'ಕಾತ್ಯಾಯಿನಿ' ಕತೆಗಳಲ್ಲಿ ಧರ್ಮದ ಮತ್ತು ವ್ಯವಸ್ಥೆಯ ಹಿಡಿತಗಳಿಂದ

ಪಾರಾಗಿ ಪ್ರಗತಿಪರ ಬದುಕು ನಡೆಸಲು ಪ್ರಯತ್ನಿಸಿ ಯಶಸ್ವಿಯಾಗುವ ಮಹಿಳಾ ಪ್ರತೀಕಗಳಿವೆ. ಸ್ತ್ರೀ-ಪುರುಷ ಸಮಾನತೆಯ ಚರ್ಚೆ ಮತ್ತದರ ಆರೋಗ್ಯಕರ ಸಂವಾದಗಳು, 'ಪರಿಷತ್ತು ಷರಬತ್ತು', 'ಅದೋ ಇದೋ'ಕತೆಗಳಲ್ಲಿ ವಾಚ್ಯವಾಗಿಯೂ ಸೂಚ್ಯವಾಗಿಯೂ ಬಂದಿದೆ.

ಚದುರಂಗರ ಕೆಲವು ಕತೆಗಳಲ್ಲಷ್ಟೇ ವರ್ಗ ಪ್ರಜ್ಞೆಯಿದೆ. 'ಬಣ್ಣದ ಬೊಂಬೆ' ಕತೆಯಲ್ಲಿ ಮಕ್ಕಳ ಮನಸ್ಸಿನ ಮೂಲಕ ವರ್ಗ ತಾರತಮ್ಯವನ್ನೂ ಹೇಳಲಾಗಿದೆ. ಇದು ಬಡತನದ ಸಮಾಜ ಅಸಮಾನ ವರ್ಗ ವಿಂಗಡಣೆಯನ್ನು ಬೆರಳಿಟ್ಟು ತೋರಿಸುತ್ತದೆ. ಮೂರು ಮತ್ತೊಂದು ಕತೆಯಲ್ಲಿ ಬಡತನ, ಸಿರಿತನಗಳನ್ನು ಪ್ರಾಣಿ ಪ್ರತೀಕದ ಮೂಲಕ ಹೇಳಲಾಗಿದೆ. 'ಸಾವಿರದ ಒಂಭೈನೂರ ಅರವತ್ತೇಳು' ಕತೆಯಲ್ಲಿ ಬಂಡವಾಳಶಾಹಿಗಳ ವಿಡಂಬನೆ ಮತ್ತು ಅವರ ದೌರ್ಜನ್ಯವನ್ನು ಅವರು ಬಡವರ ಮೇಲೆ ನಡೆಸುವ ಶೋಷಣೆಯನ್ನು ವಿಡಂಬನಾತ್ಮಕವಾಗಿ ಚಿತ್ರಿಸಿದ್ದಾರೆ. ಇವರ 'ಶವದ ಮನೆ'ಕತೆಯಲ್ಲಿ ಕೂಡ ಸಮಾಜದ ಅಸಮಾನತೆ, ದೌರ್ಜನ್ಯಗಳನ್ನು ದುರಂತ ವ್ಯಂಗ್ಯದ ಮೂಲಕ ಅನಾವರಣ ಮಾಡಲಾಗಿದೆ. ಚದುರಂಗರ ವರ್ಗ ಪ್ರಜ್ಞೆಯ ಕತೆಗಳಲ್ಲಿ ಇದು ಪ್ರಮುಖ ಕತೆಯಾಗಿದೆ.

'ಬಣ್ಣದ ಬೊಂಬೆ'ಕತೆಯಲ್ಲಿ ಶ್ರೀಮಂತರ ಮನೆಯಲ್ಲಿ ಸವಲತ್ತುಗಳೊಂದಿಗೆ ಬೆಳೆಯುತ್ತಿರುವ ವನಜಾಕ್ಷಿ ಅವರ ಮನೆಯ ಪಕ್ಕದ ಗುಡಿಸಲಿನಲ್ಲಿ ನಿರ್ಗತಿಕ ಬದುಕು ಸಾಗಿಸುವ ಪುಟ್ಟರಂಗಿ. ತಂದೆತಾಯಿಯರ ಕಟ್ಟುನಿಟ್ಟಿನ ಬೇಲಿಯೊಳಗೆ ಅಸಂತೋಷವಾಗಿ ಬೆಳೆಯುತ್ತಿದ್ದ ಆ ಶ್ರೀಮಂತರ ಹುಡುಗಿ ಪುಟ್ಟರಂಗಿಯ ಸ್ನೇಹ ಮಾಡಿ ಜೊತೆಯಲ್ಲಿ ಕಲಿತು ಒಂದಷ್ಟು ಹೊತ್ತು ಆಟವಾಡಿ ಸಂತೋಷಪಡುವ ವೇಳೆಯೆಂದರೆ ವಾರದಲೊಂದು ದಿನ ವನಜಾಕ್ಷಿಯ ತಾಯಿ ಲೇಡಿಸ್ ಕ್ಲಬ್‌ಗೆ ಹೋಗಿದ್ದಾಗ ಮಾತ್ರ. ವನಜಾಕ್ಷಿ ತನ್ನ ಆಟದ ಬೊಂಬೆಯನ್ನು ಪುಟ್ಟರಂಗಿಗೆ ಕೊಡುತ್ತಾಳೆ. ತನ್ನ ತಾಯಿಗೆ ತಿಳಿಯದಂತೆ. ಆದರೆ ಪುಟ್ಟರಂಗಿಯ ತಾಯಿ ಶ್ರೀಮಂತರ ಮನೆಯ ಆಟಿಕೆಯನ್ನು ಕದ್ದ ಆಪಾದನೆ ತಮ್ಮ ಮೇಲೆ ಬರಬಾರದೆಂಬ ಕಾರಣದಿಂದ ವಾಪಸ್ಸು ಕಳಿಸುತ್ತಾಳೆ. ತನ್ನ ಮಗಳಿಗೆ ಅಂಥ ಆಟಿಕೆಯನ್ನು ಕೊಂಡುಕೊಳ್ಳುವ ಶಕ್ತಿಯೂ ಅವಳಿಗಿರುವುದಿಲ್ಲ.

ಈ ಕತೆಯ ಶೀರ್ಷಿಕೆ ನಾನಾ ಸ್ತರದಲ್ಲಿ ಅರ್ಥ ಹೊರಡಿಸುವ ಸಾಮರ್ಥ್ಯ ಹೊಂದಿದೆ. ವರ್ಗಗಳ ನಡುವಿರುವ ಅಂತರ ಮತ್ತು ಸಂಬಂಧ ಮಾತ್ರವಲ್ಲದೇ ತೀವ್ರ ಕಳಕಳಿಯ ಮಾನವೀಯ ಬದುಕನ್ನು ಬಡವರ್ಗ ಬದುಕುತ್ತದೆಂದೂ ಶ್ರೀಮಂತವರ್ಗ ತಮ್ಮ ಹಿತಾಶಕ್ತಿಗಳಿಗನುಗುಣವಾಗಿ ಏನೂ ಮಾಡಲು ಹೇಸುವುದಿಲ್ಲವೆಂದೂ ಇದರಿಂದ ತಿಳಿಯುತ್ತದೆ.

ತನ್ನದೇ ಆದ ಬಣ್ಣದ ಬೊಂಬೆ ಹೊಂದಲು ಪುಟ್ಟರಂಗಿಗೆ ಸಾಧ್ಯವಾಗದು. ಅದು ಅವರಪ್ಪನ ಮಾತನ್ನು ಹುಡುಗಿ ಪುನರುಚ್ಚರಿಸುವುದರಿಂದ ತಿಳಿದು ಬರುತ್ತದೆ. ಪುಟ್ಟರಂಗಿಯ ತಾಯಿಯ ವರ್ತನೆ ವಿಚಿತ್ರವೆನಿಸಿದರೂ ಅವರ ಬದುಕಿನ ರೀತಿಗೆ ಅದು ಸಹಜವಾದದ್ದು. ಮತ್ತೊಬ್ಬರ ಹಂಗು ನಮಗೇಕೆಂಬ ಸ್ವಾಭಿಮಾನಕ್ಕಿಂತ ಇಲ್ಲಿ

ಮುಖ್ಯವೆನಿಸುವುದು ಕಳ್ಳತನದ ಆಪಾದನೆಯ ಭಯ. ಉಳ್ಳ ಮತ್ತು ಉಳ್ಳದರ ಎರಡೂ ವರ್ಗದವರ ನಡುವಿನ ಕಂದಕಗಳನ್ನು ಮಕ್ಕಳ ಮುಗ್ಧ ಮನಸ್ಸುಗಳ ಮೂಲಕ ಅನಾವರಣ ಮಾಡಿದ್ದಾರೆ.

'ಮರಳಿ ಅಲ್ಲಿಗೆ' ಕತೆಯನ್ನು ಕುರಿತು 'ಈ ಕತೆಯನ್ನು ಪ್ರಗತಿಶೀಲ ಪಂಥದ ಉತ್ತಮ ಪ್ರಾತಿನಿಧಿಕ ಕತೆಯೆಂದೂ ಹೊಗಳುವ ಶೇಷಗಿರಿರಾಯರು, ಮುಂದುವರೆದು ಪ್ರಗತಿಶೀಲ ಸಾಹಿತ್ಯದೊಂದಿಗೆ ನಮ್ಮ ಮನಸ್ಸು ಜೋಡಿಸುವ ಹಸಿ ಬರಹ ಆವೇಶಗಳಿಲ್ಲದ ಅತಿ ಭಾವುಕತೆಯಿಲ್ಲದ, ಆದರೆ ಪ್ರಗತಿಶೀಲ ಪಂಥದ ಉದ್ದೇಶವನ್ನು ಕಲಾತ್ಮಕವಾಗಿ ಸಾಧಿಸುವ ಕಥೆ ಕತ್ತಲಾದ ಕಡೆ ತನ್ನ ಕೈಚಳಕದಿಂದ ಬೆಳಕು ತರಿಸುವವನ ಬದುಕೇ ಕತ್ತಲೆಯಲ್ಲಿ ಮುಳುಗಿರುವ ಐರನಿಯನ್ನು ಗಮನಿಸಬೇಕು".[೩೭]

ಜೀವನ ನಿರ್ವಹಣೆಗಾಗಿ ಅಪಾಯಕಾರಿ ಕೆಲಸಗಳನ್ನು ಅನಿವಾರ್ಯತೆಯ ಕಾರಣಕ್ಕಾಗಿ ಮಾಡಬೇಕಾದ ಮಂಚಣ್ಣ, ವಿದ್ಯುಚ್ಛಕ್ತಿ ಇಲಾಖೆಯಲ್ಲಿ ಟೆಂಪರರಿ ಉದ್ಯೋಗಿ. ಅವನ ಮನದ ತುಯ್ತಗಳು ಈ ಹಿಂದೆ ಎಷ್ಟೋ ಬಾರಿ ಬರೆದಿದ್ದರೂ ಬಷೀರನ ಸಾವಿನಿಂದ ಮತ್ತಷ್ಟು ವ್ಯಾಪಕವಾಗುತ್ತದೆ. ಬಷೀರನು ರಿಪೇರಿಗಾಗಿ ಹೋದವನು ವಿದ್ಯುತ್ ಅಪಘಾತದಿಂದ ಸಾವನ್ನಪ್ಪಿರುತ್ತಾನೆ.

ಈ ಸಾವಿನ ಕೆಲಸ ಬಿಡುವುದು ಸೂಕ್ತವೆಂಬ ತೀರ್ಮಾನವನ್ನು ಆತ ತೆಗೆದುಕೊಂಡರೂ ಮನೆಯಲ್ಲಿರುವ ಮಕ್ಕಳ ಮದುವೆಗಾಗಿ ಮಾಡಿದ ಸಾಲದ, ಹೆಂಡತಿಯ ಚಿತ್ರಗಳು ಕಣ್ಣ ಮುಂದೆ ಹಾಯ್ದು ಬೇರೊಂದು ಕೆಲಸ ಸಿಗುವುದೆಂಬ ಗ್ಯಾರಂಟಿಯಿಲ್ಲದೆ, ಅವನು ಯೋಚಿಸುವಂತಾಗುತ್ತದೆ. 'ಲೈನ್‌ಮ್ಯಾನ್ ಮಂಚಣ್ಣನ ಬದುಕಿನ ಅತಂತ್ರಗಳು'ಕತೆಯಲ್ಲಿ ಸ್ಥಾನ ಪಡೆದು ಆ ಮೂಲಕ ಬಡತನ ಹಾಗೂ ವರ್ಗ ವೈರುಧ್ಯಗಳ ಅಂಶವನ್ನು ಕಾಣಿಸಿಕೊಡುತ್ತಾದಾದರೂ ಅದಕ್ಕೆ ಕಾರಣವಾದ ಸಾಮಾಜಿಕ, ಆರ್ಥಿಕ ನೆಲೆಗಳನ್ನು ಶೋಧಿಸುವುದಿಲ್ಲ. ಅದು ಲೇಖಕರ ಉದ್ದೇಶವೂ ಆಗಿರುವುದಿಲ್ಲ.

ಮೂರು ಮತ್ತೊಂದು ಮುಖ್ಯವಾಗಿ ಒಂದು ರೂಪಕ ಸಮಾಜದ ಅಸಮಾನತೆ, ಬಡವ, ಶ್ರೀಮಂತ ಎಂಬ ವರ್ಗಗಳ ನಡುವಿನ ವೈಷಮ್ಯ, ವೈರುಧ್ಯ ಎಲ್ಲಕ್ಕಿಂತ ಹೆಚ್ಚಾಗಿ ಬಡತನದಿಂದ ತೀವ್ರವಾದ ಹಸಿವು-ಇವುಗಳನ್ನು ವಿವಿಧ ವರ್ಗಗಳ ವಾರಸುದಾರರಿಗೆ ಸೇರಿದ ಮೂರು ನಾಯಿಗಳು ಸಂಭಾಷಣೆ ತಂತ್ರದಲ್ಲಿ ಲೇಖಕರು ತಿಳಿಸಲು ಹೊರಡುತ್ತಾರೆ.

ಮಾಂಸದ ತುಂಡಿಗಾಗಿ ಕಚ್ಚಾಡುವ ಮೂರು ನಾಯಿಗಳು ಪರಸ್ಪರ ತಮ್ಮನ್ನೂ ತಮ್ಮ ಒಡೆಯರನ್ನೂ ಹೊಗಳುತ್ತ, ದೂಷಿಸುತ್ತ ತಿನ್ನಲು ಕಾತರಗೊಂಡಿರುವಾಗ ಶ್ರೀಮಂತ ಪಂಗಡದವರೊಬ್ಬರ ಸುಂದರವಾದ ಜೂಲುನಾಯಿಯೊಂದು ಕೊನೆಗೆ ಎಲ್ಲವನ್ನು ಬಾಯಿ ಮುಚ್ಚಿಸಿ ಮಾಂಸದ ತುಂಡನ್ನು ತಿನ್ನುತ್ತದೆ. 'ಶ್ರೀಮಂತ

ನಾಯಿಗಳು ಬಡನಾಯಿಗಳನ್ನು ಆಕ್ರಮಿಸಿ ಮಾಂಸದ ತುಂಡನ್ನು ಕಬಳಿಸುವುದರಲ್ಲಿ ಶ್ರೀಮಂತರು ಬಡವರನ್ನು ಶೋಷಿಸುವ ಚಿತ್ರ ಪ್ರತಿಮಾ ರೂಪದಲ್ಲಿದೆ'

'ವಿಡಂಬನೆ' ಈ ಕತೆಯ ಮುಖ್ಯ ಅಂಶ ಎಂದು ಕೊಂಡರು ಅದು ತೀವ್ರವಾಗದೆ ಮಂದಸ್ವರದಲ್ಲೇ ನಿಲ್ಲುತ್ತದೆ. ಸಮಾಜ ಚಿತ್ರಣ ಕೂಡ ಅಂಶಿಕವಾಗಿ ಬಂದು ಆ ಉದ್ದೇಶವೂ ಅಪೂರ್ಣವಾಗುತ್ತದೆ. ಸಮಾಜದ ಅಸಮಾನತೆ, ಅದರಲ್ಲೂ ವರ್ಗ ಅಸಮಾನತೆ ಕತೆಯಲ್ಲಿ ಸ್ಥಾನ ಪಡೆದು ಚಿತ್ರಣಗೊಳ್ಳುತ್ತ ಹೋಗುವುದು ಅವರ ಉದ್ದೇಶವಾಗಿದೆ.

'ಗುಲಾಬಿ'ಕತೆಯ ಮುಖ್ಯ ವಸ್ತು ಬಡವ-ಶ್ರೀಮಂತರ ನಡುವಿನ ತಾರತಮ್ಯ, ವೈಭವದ ಆಡಂಬರದ ಜೀವನ ನಡೆಸುವ ಹೆಣ್ಣೊಂದು ಗುಲಾಬಿಯನ್ನು ಕಿತ್ತು ಮುಡಿದು ಕೊಳ್ಳುವುದು. ಅದರ ಸೌಂದರ್ಯವನ್ನು ಮೆಚ್ಚಿ ಅಲ್ಲ ತನ್ನ ಗೆಳತಿಯರು ಈ ಹೂವನ್ನು ಮುಡಿದು ತನ್ನನ್ನು ನೋಡಿ ಅಸೂಯೆಪಡಲೆಂದು, ತೋಟಕ್ಕೆ ನೀರು ಹಾಕುವ ಕೆಲಸದಾಕೆ ಬಡ ಹೆಂಗಸು ಗುಲಾಬಿಯನ್ನು ಕೀಳುವುದು, ಅದರ ಸೌಂದರ್ಯ ಕಂಡು ಅಲ್ಲ ದೇವರ ಮುಡಿಗೇರಿಸಲು. ಆದರೆ ಗುಲಾಬಿಗೆ ಬೇಕಿರುವುದು ಬೇರಾವ ಅನ್ಯ ಕಾರಣಗಳ ಹಿನ್ನೆಲೆಯೂ ಇಲ್ಲದೇ ತನ್ನ ಸೌಂದರ್ಯವನ್ನು ಪ್ರೀತಿಸುವ ನಿಷ್ಕಳಂಕ ಮನಸ್ಸಿನ ಮೆಚ್ಚುಗೆಗಾಗಿ ಗುಲಾಬಿ ಇಲ್ಲಿ ನಿರೂಪಣೆ ಮಾಡುತ್ತದೆ.

ಮನೆಯೊಡೆಯ ಕುಡಿದ ಮತ್ತಿನಲ್ಲಿ ತುರುಬಿನಲ್ಲಿದ್ದ ಹೂವನ್ನು ಕಿತ್ತು ಕಾಲಲ್ಲಿ ಹೊಸಕುವುದು, ಮಾಲಿಯ ಮೇಲೆ ಕಳ್ಳತನದ ಆರೋಪ ಹೊರಿಸಿ ಕೆಲಸದಿಂದ ತೆಗೆದುಹಾಕುವುದು. ಇವೆಲ್ಲ ಕತೆಯಲ್ಲಿ ಬರುತ್ತವೆ.

ವಾಸ್ತವವಾಗಿ ಗುಲಾಬಿ ಎಂಬುದು ಸೌಂದರ್ಯದ ಸಂಕೇತವಾಗಿ. ತೋಟದ ಮಾಲಿ ಮತ್ತು ಮನೆಯೊಡತಿ ಇಬ್ಬರೂ ಬಡತನದ ಸಿರಿತನ ವರ್ಗಗಳ ಸಂಕೇತವಾಗುತ್ತಾರೆ. ತನ್ನೆಲ್ಲ ಸೌಂದರ್ಯ ಇಂಪು ಕಂಪುಗಳು ಕಪಟ ಮತ್ತು ಕೃತಕ ಜೀವನ ನಡೆಸುವ ಶ್ರೀಮಂತರಿಗಷ್ಟೇ ಮೀಸಲಾದವಲ್ಲ ಎಂಬ ವಿಷಾದ ರೊಚ್ಚು ಗುಲಾಬಿಗಿದೆ.

ಚದುರಂಗರು ಪ್ರಗತಿಶೀಲ ಚಳವಳಿಯ ಪ್ರಭಾವಕ್ಕೆ ಒಳಗಾಗಿ ಬರೆದಿರುವ ವರ್ಗ ಪರಿಕಲ್ಪನೆಯ ಕತೆಗಳಿವು. ಹಸಿವು, ಬಡತನ ಮತ್ತು ಅಸಹಾಯಕ ದೀನ ಬದುಕಿನಲ್ಲಿ ನರಳುವ ಜನಗಳು ಇಲ್ಲಿ ತೆರೆದುಕೊಳ್ಳುತ್ತಾರೆ. ಅನೇಕ ಮಿತಿಗಳಲ್ಲಿಯೇ ಶೋಷಕ-ಶೋಷಿತ ಎಂಬ ಬಲವಂತದ ವರ್ಗೀಕರಣಗಳು ಕೃತಕವಾಗುವ ಅಪಾಯಗಳೆಲ್ಲವೂ ಇಂಥಲ್ಲಿ ತಲೆದೋರುವುದೆಂಬುದು ಗಮನೀಯ ಅಂಶ.

**ವರ್ಗ, ವರ್ಣ, ಲಿಂಗ ಸಂಬಂಧೀ ನೆಲೆಗಳಲ್ಲಿ ಪ್ರಗತಿಶೀಲರ ಕತೆಗಳ ಒಟ್ಟು ನೋಟ**

ಕಟ್ಟೀಮನಿ ಕತೆಗಳಲ್ಲಿ ವರ್ಗ ಸಂಬಂಧೀ ನೆಲೆಗಳು ಅನಾವರಣವಾಗಿರುವ ಸ್ವರೂಪವು ಅವರ ಪ್ರಗತಿಶೀಲ ಧೋರಣೆಯನ್ನು ಹೇಳುವಂತಿವೆ. ಹತ್ತು ಹಲವು ಅಂಶಗಳನ್ನು ಮೂಲವಾಗಿಟ್ಟುಕೊಂಡು ಆರ್ಥಿಕ, ಸಾಮಾಜಿಕ,

ರಾಜಕೀಯ ನೆಲೆಗಳ ವಿಷಮತೆಯನ್ನು ಇವರ ಕತೆಗಳು ದಾಖಲಿಸುತ್ತವೆ. ಬಡವ-ಶ್ರೀಮಂತ ವೈದೃಶ್ಯಗಳ ಮೂಲಕ ಆರ್ಥಿಕ ಸ್ಥಿತಿಗತಿಗಳನ್ನು ತಿಳಿಸುತ್ತ, ಉಳ್ಳವರ ಪರ ನಿರೂಪಕರ ದನಿಯು ಸಾನುಕಂಪವನ್ನು ವ್ಯಕ್ತಪಡಿಸುತ್ತದೆ. ಬರಗಾಲ, ಕೋಮುವಾದಿ ಶಕ್ತಿಗಳು ಜಮೀನ್ದಾರಿ ಕ್ರೌರ್ಯದ ಅನಾವರಣ , ಜಮೀನ್ದಾರ ಮತ್ತು ರೈತನ ವೈದೃಶ್ಯ ನೆಲೆ ಇವು ವ್ಯಕ್ತವಾಗಿರುವ ಬಗೆ ತೀಕ್ಷ್ಣವಾಗಿದೆ. ಬರಗಾಲ ಉಂಟಾದ ಕಾರಣಗಳು ಮತ್ತು ಅದನ್ನು ಇಲ್ಲವಾಗಿಸುವ ಹತೋಟಿಗೆ ತರುವ ವ್ಯವಸ್ಥೆಯ ಯತ್ನ ಇವ್ಯಾವುದೂ ಲೇಖಕರಿಗೆ ಮುಖ್ಯವಾಗಿಲ್ಲ. ಬರಗಾಲದ ಪರಿಣಾಮವಾಗಿ ಗುಳೇ ಹೊರಟ ಕುಟುಂಬ ಅದರ ಇರುಸುಮುರುಸು ಮಾತ್ರ ಕತೆಯಲ್ಲಿ ಸ್ಥಾನ ಪಡೆಯುತ್ತವೆ. ಹಾಗೆಯೇ ಕೋಮುವಾದಿ ಶಕ್ತಿಗಳು ಕೆಳಗಿನ ಸ್ತರದಲ್ಲಿ ನೆಮ್ಮದಿಯಿಂದ ಬದುಕುತ್ತಿರುವ ಸಮೂಹಗಳನ್ನು ಜಾತಿ ನೆಲೆಯಲ್ಲಿ ಉದ್ರೇಕಿಸುವ ಅಂಶ ಕಿಂಚಿತ್ತು ಕಾಣುತ್ತಾದರೂ ಅದು ಲೇಖಕರ ಕೇಂದ್ರದೃಷ್ಟಿಯಾಗುವುದಿಲ್ಲ. ಬದಲಾಗಿ ಬಡತನ ಮತ್ತು ಆ ಬಡತನದಲ್ಲೂ ಬಿಡದ ಗೆಳೆತನವಷ್ಟೇ ಲೇಖಕರಿಗೆ ಪ್ರಧಾನವೆನಿಸುತ್ತದೆ. ಇಲ್ಲೆಲ್ಲ ಲೇಖಕರು ತೋರುವ ವರ್ಗ ಸಂಬಂಧೀ ನೆಲೆಗಳು ಆಳವಾದ ಶೋಧನೆಯ ಮಟ್ಟದ್ದಾಗದೇ ಮೇಲು ಮೇಲಿನ ಹಂತಕ್ಕೆ ನಿಂತು ಬಿಡುತ್ತದೆ. ಜಮೀನ್ದಾರೀ ಕ್ರೌರ್ಯಕ್ಕೆ ಪ್ರತಿಯಾಗಿ ರೋಷದ ಪ್ರತೀಕಾರವೇ ಉತ್ತರವಾಗುತ್ತದೆ.

ರಾಜಕೀಯ ಕ್ಷೇತ್ರದ ಅವ್ಯವಸ್ಥೆ ಹೊಲಸುಗಳ ಚಿತ್ರಣ ಕೆಲವು ಕತೆಗಳಲ್ಲಿ ಬಂದಿದೆ. ಸ್ವಾತಂತ್ರ್ಯ ಸಮಾನತೆಗಳ ಪರಿಕಲ್ಪನೆಯು ವರ್ಗನೆಲೆಯ ಮೂಲಕ ಪಡೆದುಕೊಳ್ಳುವ ಅರ್ಥ ಸಾಧ್ಯತೆಗಳತ್ತ ಲೇಖಕರ ಗಮನವಿದೆ. ಸಮಾಜಸೇವೆ ಮತ್ತು ಆಧ್ಯಾತ್ಮ ಸಾಧನೆಯ ಸೋಗಿನಲ್ಲಿ ಬಡಮಕ್ಕಳನ್ನು ಶೋಷಿಸುವ ಚಿತ್ರಣ ಕೂಡ ಬಂದಿದ್ದು, ಧಾರ್ಮಿಕ ಹಾಗೂ ಶೈಕ್ಷಣಿಕ ಕೇಂದ್ರಗಳ ಅಮಾನವೀಯ ಹಿಂಸೆಯತ್ತ ಬೆಳಕು ಬೀರಿದೆ. ಪಟ್ಟಭದ್ರರ ಎದುರು ಹೋರಾಟ ವಿಫಲಗೊಳ್ಳುವಾಗಲೂ ಛಲಬಿಡದೆ ನಿರಂತರ ಪ್ರತಿಭಟನೆ ಅನಿವಾರ್ಯವೆಂಬ ಲೇಖಕರ ದೃಷ್ಟಿ ಹೆಚ್ಚು ಆರೋಗ್ಯಕರವಾದದ್ದು. ಕಟ್ಟಿಮನಿ ಕತೆಗಳಲ್ಲಿ ಬಂಡವಾಳಗಾರ -ಕಾರ್ಮಿಕನ ಮುಖಾಮುಖಿ ಸಂಘರ್ಷವಿದೆ. ಬಹಳ ಮುಖ್ಯವಾಗಿ ಕಾರ್ಮಿಕನಾಗಿದ್ದುಕೊಂಡು ಶ್ರೀಮಂತನಾದವನೇ ಬಂಡವಾಳಗಾರನಾಗಿ ಕಾರ್ಮಿಕನನ್ನು ಶೋಷಿಸುತ್ತಾನೆ. ಅಂದರೆ ಮನುಷ್ಯನ ಹೃದಯದೊಳಗೆ ಮಾನವತೆಯ ಸೆಲೆ ಕಾಣದೇ ಯಾರ ಪರ ವಹಿಸಿಯೂ ಪ್ರಯೋಜನವಿಲ್ಲವೆಂಬ ಮನೋಧರ್ಮ ಇಲ್ಲಿಯದು. ಆರ್ಥಿಕ ದುಃಸ್ಥಿತಿಯು ಪ್ರೇಮವನ್ನು, ವಾತ್ಸಲ್ಯವನ್ನು ನಿಯಂತ್ರಿಸಿಬಿಡುತ್ತದೆಂಬುದರತ್ತ ಲೇಖಕರ ಗಮನವಿದೆ. ಉಳ್ಳವರಲ್ಲಿ ನಡೆಯುವ ಕ್ಷುಲ್ಲಕತೆಯ ಉಲ್ಲೇಖವಿದೆ. ವೇಶ್ಯಾ ಬದುಕಿನ ಸಂಕಷ್ಟಗಳಿಗೆ ಬಡತನವೇ ಕಾರಣ ಎಂಬ ದನಿಯಿದೆ. ಬಡವ-ಶ್ರೀಮಂತರ ವೈದೃಶ್ಯದ ಚೌಕಟ್ಟಿನಲ್ಲೇ ಕಟ್ಟಿಮನೀ ವರ್ಗ ಸಂಘರ್ಷವನ್ನು ಹೆಚ್ಚಾಗಿ ನೋಡುವ ಪ್ರಯತ್ನ ಮಾಡಿದ್ದಾರೆ. ಅನಕ್ಷರತೆ , ಗೂಂಡಾಪ್ರವೃತ್ತಿ, ವ್ಯಕ್ತಿ ಸಂಸ್ಕಾರವಿಲ್ಲದಿರುವಿಕೆ ಮೊದಲಾದವು ಸಾಮಾಜಿಕ ಅನಿಷ್ಟಗಳ ಅಸ್ತಿತ್ವಕ್ಕೆ ಕಾರಣವೆಂಬುದು ಲೇಖಕರ ಅಭಿಮತ.

ಕಟ್ಟೀಮನಿಯ ಕೆಲವು ಕತೆಗಳಲ್ಲಿ ವರ್ಗ ಮತ್ತು ಲಿಂಗ ನೆಲೆಗಳೆರಡೂ ಜೊತೆಯಲ್ಲಿ ಬಂದಿವೆ. ಇಲ್ಲೆಲ್ಲ ಗಂಡುಹೆಣ್ಣಿನ ಸಂಬಂಧಗಳು, ಆರ್ಥಿಕತೆಯನ್ನು ಅವಲಂಬಿಸುವ ಅಥವಾ ಆರ್ಥಿಕ ಸ್ಥಾನಮಾನದ ಸಂಬಂಧಗಳನ್ನು

ನಿಯಂತ್ರಿಸುವ ಅಂಶಗಳು ಅನಾವರಣವಾಗಿವೆ. ಕಟ್ಟೀಮನಿಯವರ ಕತೆಗಳಲ್ಲಿ ಸ್ತ್ರೀ-ಪುರುಷ ಸಂಬಂಧೀ ನೆಲೆಗಳು ಗಂಭೀರವಾದ ವಿವೇಚನೆಗೆ ಒಳಗಾಗಿವೆ. ಸ್ತ್ರೀ-ಪುರುಷ, ಸ್ತ್ರೀ-ಸ್ತ್ರೀ ಮತ್ತು ಪುರುಷ-ಪುರುಷ ಈ ನೆಲೆಗಳಲ್ಲಿ ಇವು ಬಂದಿವೆ.

ಅತ್ತೆ-ಸೊಸೆ ಸಂಬಂಧ ಸ್ವರೂಪ ವೈಮನಸ್ಯ, ಕುಟುಂಬದ ಬಿರುಕುಗಳು ಪುನರ್ ಹೊಂದಾಣಿಕೆ, ವರದಕ್ಷಿಣೆಯ ನೆವದಲ್ಲಿ ಹೆಣ್ಣಿಗೆ ಆಗುವ ಹಿಂಸೆ ಶೋಷಣೆ ಇವು ಬಂದಿವೆ. ಇಂತಹ ಕಡೆ ಕಟ್ಟೀಮನಿಯವರು ಕುಟುಂಬ ಚೌಕಟ್ಟಿನ ಸೀಮಿತಗಳನ್ನು ಹಾಗೆಯೇ ಬಳಸಿಕೊಳ್ಳುತ್ತಾರೆ. ಸ್ತ್ರೀಯನ್ನೇ ಸ್ತ್ರೀಯು ಅರ್ಥ ಮಾಡಿಕೊಳ್ಳುವ ಅರ್ಥವಾದರೂ ಒಳಿತಿನ ನೆಲೆಯಲ್ಲಿ ವರ್ತಿಸದ ಸ್ಥಿತಿಗಳು ಬರುತ್ತವೆ. ಮಹಿಳೆಯ ಸಂಕಷ್ಟ, ಅನಾಥತೆ , ಅಸಹಾಯಕತೆಗಳನ್ನು ಅರ್ಥ ಮಾಡಿಕೊಂಡು ಆಸರೆ ನೀಡುವ ಮಾನವೀಯ ಮನಸ್ಸುಗಳ ಮೇಲೆಯೇ ಸಮಾಜದ ಸ್ತ್ರೀದನಿಗಳು ಆಪಾದನೆಗಳನ್ನು ಹೊರಿಸುತ್ತವೆ. ಗಂಡುಹೆಣ್ಣಿನ ವಿವಾಹ ಚೌಕಟ್ಟಿನ ಬದುಕು ಅವಿವಾಹೇತರ ಬದುಕು ಎರಡೂ ಇವರ ಕತೆಗಳಲ್ಲಿ ಬರುತ್ತವೆ.



ದಾಂಪತ್ಯ ಸಂಬಂಧದ ಬಿರುಕುಗಳು ಇವರ ಕತೆಗಳಲ್ಲಿ ಹೆಚ್ಚು ದಂಪತಿಗಳ ನಡುವೆ ಅನ್ಯ ವ್ಯಕ್ತಿಯೊಬ್ಬನ ಪ್ರವೇಶ ಪರಿಣಾಮ, ಕುಟುಂಬ ಸಂಬಂಧಗಳ ವಿಘಟನೆಯ ಹಾದಿ ಹಿಡಿಯುತ್ತವೆ. ಕೆಲವು ಕತೆಗಳಂತೂ ಹೆಣ್ಣಿನ ವರ್ತನೆ ತೀರಾ ಅಸ್ಪಷ್ಟವಾಗಿದೆ. ಗಂಡನ ಪ್ರೀತಿಯನ್ನು ಅರ್ಥ ಮಾಡಿಕೊಳ್ಳುವ, ಆದರೆ ಅನ್ಯ ಸಂಬಂಧದಲ್ಲೂ ಸ್ಪಷ್ಟವಾಗಿ ವರ್ತಿಸದೆ ತವರಿಗೆ ನಡೆದು ಬಿಡುವ ಹೆಣ್ಣುಗಳು ಇಲ್ಲಿ ಬರುತ್ತಾರೆ.

ಹೃದಯವಂತ ಸ್ಥಾನಗಳಲ್ಲಿ ಬರಡಾಗುವ ಹಣಕ್ಕಾಗಿ ಸೇವೆಯನ್ನು ದುರುಪಯೋಗಪಡಿಸಿಕೊಳ್ಳುವ ಪರಿ ದಾಖಲಾಗಿದೆ. ಬಡವೆ, ಅನಾಥೆ, ದಿಕ್ಕಿಲ್ಲದವರನ್ನು ಶ್ರೀಮಂತರು ಶೋಷಿಸುವುದು. ಉಳ್ಳವರು ತಮ್ಮೆಲ್ಲ ನೀಚತನ, ಕಳ್ಳತನಗಳನ್ನು ಬಡವರ ತಲೆಗೆ ಕಟ್ಟಿ ಪಾರಾಗುವ ಘಟನೆಗಳಿವೆ.

ಭೂಮಾಲೀಕ ಮತ್ತು ಕೂಲಿಕಾರರ ನಡುವಿನ ಸಂಘರ್ಷದ ನೆಲೆ, ಪ್ರಾಂತೀಯ ಹೋರಾಟ ಇವರ ಕೆಲವು ಕತೆಗಳಲ್ಲಿ ಬಂದಿದೆ. ಬಂಡವಾಳಗಾರ ಕಾರ್ಮಿಕ ನೆಲೆಯ ಸಂಘರ್ಷವಿದೆ. ಕಾರ್ಮಿಕ ಹೋರಾಟ ಸೋಲು ಕಂಡರೂ ಆ ಸೋಲಿಗಿರುವ ಕಾರಣಗಳನ್ನು ಪಾರ್ಶ್ವದಲ್ಲೇ ಹೇಳುವ ರೀತಿ ಹೆಚ್ಚು ಸಮಂಜಸವೂ ಅರ್ಥಪೂರ್ಣವೂ ಆಗಿದೆ.

ವಿಡಂಬನೆ, ದುರಂತ ವ್ಯಂಗ್ಯಗಳಲ್ಲಿ ಸಾಮಾಜಿಕ ಅಸಮಾನತೆಯನ್ನೂ ಅದರ ಪರಿಣಾಮಗಳನ್ನೂ ನಿರಂಜನರ ಕತೆಗಳು ಹೇಳಿವೆ. ಇಲ್ಲಿನ ಪ್ರಖರವಾದ ಸೂಕ್ಷ್ಮ ಅವಲೋಕನ. ಐತಿಹಾಸಿಕ ಅರಿವು ಗಂಭೀರವಾದುದು. ಕಾರ್ಮಿಕಪರವಾಗಿ ವರ್ಗಪ್ರಜ್ಞೆಯನ್ನು ಅರ್ಥ ಮಾಡಿಕೊಳ್ಳುವ ಪ್ರಯತ್ನದ ಜೊತೆಗೆ ಬಂಡವಾಳಗಾರನ ಸ್ಥಾನದಲ್ಲೂ ನಿಂತು ನೋಡಲಾಗಿದೆ. ಹಸಿವು ಬಡತನಗಳಿಂದ ಸೃಷ್ಟಿಯಾದ ಅಸಮಾನತೆಗಳು ಬರಗಾಲದ

ಕಾರಣದಿಂದ ಉಂಟಾದ ಸಂಕಷ್ಟಗಳು, ಕಲಾವಿದರ ಬಡತನದ ಸ್ಥಿತಿ, ಬಂಡವಾಳಶಾಹಿ ಸಮಾಜದ ದುರ್ಗುಣಗಳು, ಅದರ ಪರಿಣಾಮ ಇವೆಲ್ಲವೂ ನಿರಂಜನರ ವರ್ಗನೆಲೆಯ ಅಂಶಗಳಾಗಿ ಅಧ್ಯಯನಕ್ಕೆ ಸಿಗುತ್ತವೆ. ಬಂಡವಾಳ ಸಂಸ್ಕೃತಿ ನಡೆಸಿದ, ಸೃಷ್ಟಿಸಿದ ಅಸಮಾನತೆಗಳಿಗೆ ಲೇಖಕರ ಒತ್ತು ಹೆಚ್ಚಿದೆ. ಬಡತನ ಭಿಕ್ಷುಕತನಗಳಿಗೆ ಬಗ್ಗಿಹೋದ ಮನುಷ್ಯನ ಮನಸ್ಸು ಸ್ವಾವಲಂಬಿ ನೆಲೆಯನ್ನು ಅನುಮಾನದಿಂದ ನೋಡುವ, ತಿರಸ್ಕರಿಸುವ ಅಂಶವನ್ನು ನಿರಂಜನರ ಕತೆ ಅನಾವರಣ ಮಾಡುತ್ತದೆ. ನಿರಂಜನರು ಮಾರ್ಕ್ಸ್‌ವಾದಿ ಧೋರಣೆಯುಳ್ಳವರು. ಮಧ್ಯಮವರ್ಗಗಳಿಗೆ ತಮ್ಮ ಜಾತಿಗಿಂತ ವರ್ಗವೇ ಹೆಚ್ಚು ಸಂಕಷ್ಟಗಳನ್ನೊಡ್ಡಿರುವುದೆಂಬ ತಿಳುವಳಿಕೆಯುಳ್ಳವರು. ಇಷ್ಟಾದರೂ ಅವರು ಜಾತಿ ನೆಲೆಯ ಅನಾಹುತಗಳನ್ನು ಗುರುತಿಸದೇ ಇಲ್ಲಿ ಕಟ್ಟಿಮನಿಯವರಲ್ಲಿ ಕಾಣದ ಜಾತಿ ನೆಲೆ ವಿಚಾರಗಳು ನಿರಂಜನರ ಆರೇಳು ಕತೆಗಳಲ್ಲಿ ಬಂದಿವೆ ಎಂಬುದೇ ಈ ಮಾತಿಗೆ ಸಾಕ್ಷಿ. ಜಾತಿಮತಗಳ ವಿಚಾರದಲ್ಲಿರುವ ಅಂಧಶ್ರದ್ಧೆ. ಆ ಮೂಲಕ ವ್ಯಕ್ತವಾದ ಕ್ರೈಸ್ತ ಪಾದ್ರಿಯೊಬ್ಬನ ಅಮಾನವೀಯ ನಡವಳಿಕೆ, ಧರ್ಮಾಂಧತೆಯ ಅಪಾಯ ಇವು ಬಂದಿವೆ.

ತನ್ನ ಬದುಕಿಗೆ ತಾನೆ ಹೊಣೆಯಾಗಿ ತನಗೆ ತಿಳಿದಂತೆ ಬದುಕನ್ನು ರೂಪಿಸಿಕೊಂಡ ಮರ್ಯಾದೆಯಿಂದ ಜೀವಿಸುತ್ತಿದ್ದ ಮಹಿಳೆಯನ್ನು ಅಂಧ ಕಂದಾಚಾರಗಳ ಹೆಸರಿನಲ್ಲಿ ಬಹಿಷ್ಕಾರ ಹಾಕುವುದು. ಅವಳ ಮಗನನ್ನು ಜಾತಿ ಕೆಟ್ಟವಳ ಮಗನೆಂದು ಹೀಯ್ಯಾಳಿಸಿ ಬಾಲ ಮನಸ್ಸನ್ನು ದಂಡಿಸುವುದು ಇಲ್ಲೆಲ್ಲ ಕತೆ ಜಾತಿಯ ನೆಲೆಗಳನ್ನು ಅವರ ಕ್ರೂರ ನಡವಳಿಕೆಯ ಮೂಲಕ ಅನಾವರಣ ಮಾಡುತ್ತದೆ. ಇಷ್ಟಾದರೂ ಕೂಡ ಜಾತಿ ವರ್ಗಗಳನ್ನು ಮೆಟ್ಟಿ ನಿಂತು ತನ್ನ ಬದುಕನ್ನು ರೂಪಿಸಿಕೊಳ್ಳುವ ಹುಡುಗನ ಚಿತ್ರಣವನ್ನು ವಿಕಸನ ಪ್ರಕ್ರಿಯೆಯಲ್ಲಿ ಹಿಡಿದಿಡುವ ನಿರಂಜನರು ಮೆಚ್ಚುಗೆಗೆ ಪಾತ್ರರಾಗುತ್ತಾರೆ. ತನ್ನ ದೇಶ ಸ್ವಾತಂತ್ರ್ಯಕ್ಕಾಗಿಯೂ, ಗಂಡನ ಪ್ರಾಣ ರಕ್ಷಣೆಗಾಗಿಯೂ ಹೆಣ್ಣಾದವಳು ತನ್ನ ಮೇಲಿನ ಅತ್ಯಾಚಾರವನ್ನು ಸಹಿಸಿಕೊಳ್ಳುವ ಚಿತ್ರವೊಂದಿದೆ. ಪರಿಸ್ಥಿತಿಯ ಕೈಗೊಂಬೆಯಾದ ಹೆಣ್ಣು ಅಸಹಾಯಕಳಾದ ಅವಳನ್ನು ಭೋಗಿಸುವ ಪುರುಷ, ಇವೆಲ್ಲ ಈ ನೆಲೆಯ ಮತ್ತೊಂದು ಮುಖಗಳಾಗಿ ಕಾಣುತ್ತವೆ. ದಾಂಪತ್ಯ ಚೌಕಟ್ಟಿನಲ್ಲಿ ಬಾಳಲಾಗದೇ ಬೇರೊಬ್ಬನೊಂದಿಗೆ ಓಡಿ ಹೋಗುವ ಹೆಣ್ಣು ಮತ್ತು ಆ ಕಾರಣಕ್ಕಾಗಿ ಮಾನಸಿಕ ವಿಕಾರಕ್ಕೊಳಗಾದ ಗಂಡು ಈ ಚಿತ್ರಣ ಒಂದಿದೆ. ಗಂಡನಿಗೆ ಮೋಸ ಮಾಡಿ ಮತ್ತೊಬ್ಬ ಪ್ರಿಯಕರನನ್ನು ಹೊಂದುವ ಹೆಂಡತಿಯ ನಯವಂಚಕತನ ಇದಾಗಿದ್ದು, ಇದರ ಇತರ ಆಯಾಮಗಳು ಮುಖ್ಯವಾಗದೇ ವ್ಯಕ್ತಿ ಚಿತ್ರಣದ ಘಟನಾತ್ಮಕತೆಗೆ ಪೋಷಕವಾಗಿಯಷ್ಟೆ ಬರುತ್ತದೆ. ಹೆಂಡತಿಯ ಶೀಲ, ನಡತೆಯ ಬಗ್ಗೆ ಗಂಡನಾದವನ ಗುಮಾನಿ, ಅಪನಂಬಿಕೆಗಳು ಪ್ರಾರಂಭದಲ್ಲಿ ಕತೆಯ ಕೊನೆಯಲ್ಲಿ ಅವನ ಅನುಮಾನಗಳು ಅರ್ಥಹೀನ ಎನಿಸುವ ಮಟ್ಟಕ್ಕೆ ಬರುತ್ತವೆ. ಅಕ್ರಮ ಲೈಂಗಿಕ ಸಂಬಂಧಗಳಲ್ಲಿ ಗಂಡನಾದವನು ಹೆಂಡತಿಯ ಪ್ರಿಯಕರನನ್ನು ಸಾವಕಾಶವಾಗಿ ಕಾದು ಮುಗಿಸುವ ಯೋಜನೆಗಳು. ಆ ಮೂಲಕ ತನ್ನ ದಾಂಪತ್ಯದ ಬಿರುಕನ್ನು ಮುಚ್ಚುವ ಪ್ರಯತ್ನ ಹೆಂಡತಿಯ ಅಕ್ರಮ ನಡತೆಗೆ ಬೇಸರಪಟ್ಟು, ಸ್ಥಾನ, ಮರ್ಯಾದೆಯ ಕಾರಣ ಮುಂದೊಡ್ಡಿ ಆತ್ಮಹತ್ಯೆ ಮಾಡಿಕೊಳ್ಳುವ ಗಂಡನ ಪಾತ್ರ ಚಿತ್ರಣ ಪ್ರಸಂಗವಕಾಶ ಅತ್ಯಾಚಾರಕ್ಕೀಡಾದ ಹೆಂಡತಿಯನ್ನು ಗಂಡಸು

ಅಮಾನವೀಯವಾಗಿ ಕೈಬಿಡುವ ಸಂಗತಿ. ಇವೆಲ್ಲ ಕತೆಗಳಾಗಲು ಪ್ರಯತ್ನಿಸಿವೆ. ಅಂದರೆ ಮಹಿಳೆ ಮತ್ತು ಪುರುಷ ಇಬ್ಬರೂ ಕುಟುಂಬದ ಸ್ವಸ್ಥ ಚೌಕಟ್ಟನ್ನು ಉಲ್ಲಂಘಿಸಿ ದಾಂಪತ್ಯ ಸುಖಕ್ಕೆ ಎರವಾಗುತ್ತಾರೆಂಬ ದನಿ ಕಟ್ಟೀಮನಿಯವರ ಕತೆಗಳಲ್ಲಿ ಮೇಲಿಂದ ಮೇಲೆ ಬರುತ್ತವೆ.

ಎರಡನೆಯ ಹೆಂಡತಿಯಾಗಿ ಪ್ರವೇಶಿಸಿದ ಹೆಣ್ಣಿನ ಮಾನಸಿಕ ತುಯ್ತಗಳು, ಗಂಡನ ಮನೋಭಾವಗಳಿಗೆ ಹೊಂದಿಕೊಡು ಬದುಕಬೇಕಾದ ಹೆಂಡತಿಯ ಅಗತ್ಯಗಳು ಇವರ ಕತೆಯ ವಸ್ತುಗಳಾಗಿವೆ. ಹೆಣ್ಣಿನ ವ್ಯಾಮೋಹದ ಮೂಲಕ ಗೆಳೆತನವನ್ನು ಪರೀಕ್ಷಿಸುವ ಸಂದರ್ಭ ತಾಯಿಯಾದವಳೇ ಅಕ್ರಮ ಸಂಬಂಧಗಳಿಗೆ ಪ್ರೋತ್ಸಾಹಿಸುವ ಅಂಶಗಳು ಬರುತ್ತವೆ. ವಿವಾಹಪೂರ್ವ ಪ್ರೇಮ ಪ್ರಕರಣಗಳೂ ಕತೆಯಲ್ಲಿ ಬಂದಿದ್ದು, ಮನುಷ್ಯ ಸ್ವಭಾವದ ವಿಚಿತ್ರ ನಿಲುವುಗಳಿಗೆ ಬಲಿಯಾಗುವ ಸಂದರ್ಭಗಳೊಂದಿಗೆ ಹೆಣಗುತ್ತವೆ. ಒಟ್ಟಾರೆ ಕಟ್ಟೀಮನಿಯವರ ಕತೆಗಳಲ್ಲಿ ಲಿಂಗ ಸಂಬಂಧ ನೆಲೆಗಳ ವೈವಿಧ್ಯ ಪ್ರಕಟವಾಗಿದ್ದರೂ ಆಳವಾದ ಶೋಧನ ಕಾರ್ಯ ನಡೆದಿಲ್ಲ.

ನಿರಂಜನರ ಕತೆಗಳಲ್ಲಿ ಬರುವ ವರ್ಗ ಸಂಬಂಧದ ವಿಚಾರಗಳು ಕಟ್ಟೀಮನಿ ಕತೆಗಳಿಗಿಂತ ವ್ಯಾಪಕವಾಗಿವೆ. ಆರ್ಥಿಕ ನೆಲೆಯ ಬಡವ-ಶ್ರೀಮಂತ ವರ್ಗೀಕರಣ ಮತ್ತು ಶೋಷಿತರ ಪರ ನಿಲುವು ಹಾಗೆಯೇ ಜಗತ್ತಿನ ಎಲ್ಲಾ ಶ್ರೀಮಂತರನ್ನೂ ದ್ವೇಷಿಸುವ ವರ್ಗ ನೆಲೆಯ ಅತಿರೇಕವೂ ಕತೆಯೊಂದರಲ್ಲಿದೆ. ಅಂದರೆ ವರ್ಗ ನೆಲೆಯನ್ನು ನಿರಂಜನರು ಢಾಳಾಗಿ ಚಿತ್ರಿಸಿದ್ದಾರೆ. ಮಕ್ಕಳ ಮೂಲಕ ವ್ಯಕ್ತಗೊಳ್ಳುವ ಸೇವೆ, ಸೇವಕ ನೆಲೆಯ ಅನಾವರಣ ಮಾನವೀಯ ಮೇಲಿನ ಜಾತಿಯ ಭೂತವನ್ನು ನಿವಾರಿಸಿಕೊಂಡು ವ್ಯವಸ್ಥೆಯ ದೌರ್ಜನ್ಯಗಳನ್ನು ಸಹಿಸಿಕೊಂಡು ಪ್ರತಿಭಟಿಸುವ ದನಿ ಬೆಳೆಸಿಕೊಳ್ಳುವ ಚಿತ್ರಣ ಇಂತಹ ಕಡೆಯಲ್ಲಿದೆ. ಒಂದು ಕಡೆ ಜಾತಿ ಸಂಬಂಧದ ಮೂಢ ಮತ್ತು ಹೇಯ ಕೃತ್ಯಗಳನ್ನೂ ಅನಾವರಣ ಮಾಡುವ ನಿರಂಜನರು ಅಲ್ಲೇ ಹುದುಗಿಕೊಂಡಿರುವ ಮಾನವೀಯ ನೆಲೆಗಳನ್ನೂ ಸಹ ಮರೆಯದೇ ಗುರುತಿಸುತ್ತಾರೆ. ಒಟ್ಟಾರೆ ಕೆಲವೇ ಕತೆಗಳಲ್ಲಿ ನಿರಂಜನರು ಜಾತಿ ನೆಲೆಗಳನ್ನು ಗುರುತಿಸುವ ಯತ್ನ ಮಾಡಿದ್ದರೂ ಅದು ಸ್ಪಷ್ಟವಾಗುವುದಿಲ್ಲ. ಅಂದರೆ ಜಾತಿ ಸಂಕೀರ್ಣಗಳು ಮನುಷ್ಯ ಚೇತನದ ವಿಕಸನಕ್ಕೆ ಒಡ್ಡುವ ತೊಂದರೆಗಳ ಸ್ವರೂಪ ಆಳವಾಗಿಲ್ಲ. ಅದರ ಬದಲು ಜಾತಿಭೂತಗಳ ವ್ಯವಸ್ಥಿತ ಸಂಚಿನಿಂದ ಪಾರಾಗಿ ಕೇವಲ ಮನುಷ್ಯನಾಗಿ ಬದುಕಲು ಹವಣಿಸುವ ವ್ಯಕ್ತಿ ಪ್ರತೀಕಗಳನ್ನೂ ನಿರ್ಮಿಸುತ್ತಾರೆ. ಕೆಲವು ಕಡೆ ಜಾತಿ ಮತ್ತು ವರ್ಗಗಳೆರಡೂ ಒಟ್ಟಿಗೆ ನಿರೂಪಿತವಾಗಿವೆ. ಇದೇ ಸರಿಯಾದ ಕ್ರಮ. ಅಂದರೆ ಇಂತಹ ಪ್ರಯತ್ನಗಳು ಅವರಲ್ಲಿ ತೀರಾ ಕಡಿಮೆ.

ನಿರಂಜನರ ಕತೆಗಳಲ್ಲಿ ಕಾಣಿಸುವ ಲಿಂಗಭೇದದ ನೆಲೆಗಳು ಇತರ ಆಯಾಮಗಳೊಂದಿಗೆ ಮಿಳಿತಗೊಂಡು ಬಂದಿವೆ. ಗಂಡನಿಗಾಗಿ ಹೆಂಡತಿಯಾದವಳು ತನ್ನ ಸ್ವಂತ ಆಸೆ ಆಕಾಂಕ್ಷೆಗಳನ್ನು ಮುಂದೂಡುತ್ತಾಳೆ. ಗಂಡನ ಸ್ವಾತಂತ್ರ್ಯದ ಹೋರಾಟದ ಮತ್ತದರ ಧ್ಯೇಯ, ಸಮೂಹಕ್ಕಾಗಿ ಇವಳ ತ್ಯಾಗ ಎಂಬುದು ಕತೆಯೊಂದರಿಂದ ತಿಳಿದುಬರುತ್ತದೆ. ಹೆಣ್ಣು ತನ್ನ ತವರು ಮತ್ತು ಗಂಡನ ಮನೆಗಳೆರಡರಲ್ಲೂ ಅನುಭವಿಸುವ ಕಷ್ಟ ಪರಂಪರೆಯ

ಚಿತ್ರವೂ ಬಂದಿದೆ. ಮುಗ್ಧ ಹೆಂಗಸನ್ನು ವಂಚಿಸುವ ಪ್ರಕರಣವೊಂದು ಕತೆಯಲ್ಲಿ ಬಂದಿದ್ದು, ಹೆಣ್ಣಿನ ಸ್ವಭಾವ ಲಕ್ಷಣಗಳನ್ನೂ ಅದು ತಿಳಿಸಿಕೊಡುತ್ತದೆ. ಗರ್ಭಿಣಿ ವಿಧವೆಯನ್ನು ಪುರುಷ ಸಮಾಜ ಶೋಷಿಸುವ ಪ್ರಸಂಗ ಬರುತ್ತದೆ. ಸಾಮಾಜಿಕ ದಿಗ್ಬಂಧನಗಳನ್ನೂ ವಿಧಿಸಿ ಬದುಕನ್ನು ಹೊಸಕಿ ಹಾಕುವ ನಿರ್ದಯತೆಯ ಅನಾವರಣವಿದೆ. ಬಾಲವಿಧವೆಯನ್ನು ಸಮಾಜ ನೋಡುವ ರೀತಿ ಅವಳ ನರಕ ಯಾತನೆಗಳಲ್ಲಿ ನಿರಂಜನರ ಕತೆಗಳಲ್ಲಿ ವಾಸ್ತವಿಕ ಚೌಕಟ್ಟಿನಲ್ಲಿ ಬಂದಿವೆ. ಬಾಲವಿಧವೆ ತನ್ನ ಪಾಡಿಗೆ ತಾನು ದುಡಿದು ಬದುಕುತ್ತಿದ್ದರೂ, ಸಮಾಜ ಅವಳನ್ನು ಗುಮಾನಿಯಿಂದ ನೋಡುವ ಅನೈತಿಕ ಸಂಬಂಧಗಳನ್ನು ಗಂಟುಹಾಕುವ ಹೀನಾಯ ಪ್ರವೃತ್ತಿಯನ್ನು ಕತೆ ಬಯಲಿಗಿಡುತ್ತದೆ.

ಬಾಲ ವಿಧವೆ ಒಂದು ಕಡೆ ಸಮಾಜದ ಕಪಿಮುಷ್ಠಿಗೆ ಸಿಲುಕಿ ಅದರ ಹೀನಾಯ ಕ್ರೌರ್ಯಕ್ಕೊಳಗಾಗಿ ನಲುಗಿ ಜೀವ ಸವೆಸಿದ್ದಾರೆ. ಮತ್ತೊಂದು ಕಡೆ ಅವಳು ಸ್ಥಾಪಿತ ಮೌಲ್ಯಗಲನ್ನೇ ಪ್ರಶ್ನಿಸಿ ಮಗನನ್ನು ಹಡೆದು ಪೋಷಿಸಿ ಬೆಳೆಸುವ ಹಠ ಸಾಧಿಸುವುದು ಲಿಂಗ ಪ್ರಜ್ಞೆಯ ವಿಕಸನಕ್ಕೆ ಸಾಕ್ಷಿಯಾಗಿದೆ. ಬದುಕನ್ನು ಎದುರಿಸಲಾಗದ ಸನ್ನಿವೇಶದ ಒತ್ತಡಗಳು ಮತ್ತು ಬದುಕನ್ನು ಸಮರ್ಥವಾಗಿ ಎದುರಿಸುವ ಧೀಮಂತಿಕೆಗಳು ಈ ಎರಡೂ ಮುಖಗಳೂ ನಿರಂಜನರ ಕತೆಯಲ್ಲಿ ದಾಖಲಾಗಿದೆ. ಇಲ್ಲೆಲ್ಲ ಸಾಮಾಜಿಕ ಕಟ್ಟುಪಾಡುಗಳು ಮತ್ತು ಪುರುಷ ನಿರ್ಮಿತ ಮೌಲ್ಯಗಳು ಹೆಣ್ಣನ್ನು ಅರ್ಥ ಮಾಡಿಕೊಳ್ಳದ ಅವಳ ದಮನಕ್ಕೆ ಏನೆಲ್ಲ ಹುಸಿಗಳನ್ನು ಮುಂದೊಡ್ಡಿ ಜೀವ ವಿರೋಧಿಯಾಗುವ ಬಗೆಯನ್ನು ಕಾಣಿಸಲಾಗಿದೆ. ಹೆಣ್ಣು ವೇಶ್ಯೆಯಾಗುವುದು ಅವಳು ವೇಶ್ಯೆಯಾಗಲು ಇರುವ ವೈಯಕ್ತಿಕ ಮತ್ತು ಸಾಮಾಜಿಕ ಕಾರಣಗಳು ಕತೆಯಲ್ಲಿ ಸಮರ್ಪಕವಾಗಿ ಬಂದಿವೆ. ವೇಶ್ಯೆಯೊಳಗಿನ ಮಾತೃ ಹೃದಯ ಕುಟುಂಬ ಪ್ರಜ್ಞೆ ಬದುಕು ನಡೆಸಬೇಕೆಂಬ ಅವಳ ಆಕಾಂಕ್ಷೆ ನಿರಂಜನರ ಕತೆಗಳಲ್ಲಿ ಬಂದಿವೆ. ಹಸಿವು, ಕುಟುಂಬದ ನಿರ್ಲಕ್ಷ್ಯ, ಸಮಾಜದ ದುಷ್ಟಶಕ್ತಿಗಳ ಬಲತ್ಕಾರ, ಪುರುಷರ ದಬ್ಬಾಳಿಕೆ ಇವೆಲ್ಲ ವೇಶ್ಯೆಯನ್ನು ನಿರಂತರವಾಗಿ ಹಾಗೆಯೇ ಇಡಲು ಯತ್ನಿಸುವ ಕಾರಣಗಳಾಗಿವೆ. ವೇಶ್ಯಾ ಸಮಸ್ಯೆಯನ್ನು ಅದರ ಕೊಳಕು ನೋವು, ಹಿಂಸೆಗಳೊಟ್ಟಿಗೆ ಅರ್ಥ ಮಾಡಿಸಲು ಇವರ ಕೆಲವು ಕತೆಗಳು ಪ್ರಾಮಾಣಿಕ ಪ್ರಯತ್ನ ಮಾಡಿವೆ.

ನಿರಂಜನರ ಕತೆ ಅಷ್ಟಕ್ಕೇ ನಿಲ್ಲದೆ ಲಿಂಗ ಸಂಬಂಧೀ ನೆಲೆಗಳನ್ನೂ ಮತ್ತಷ್ಟು ಹಿಗ್ಗಿಸಿಕೊಳ್ಳುತ್ತದೆ. ಸಾಂಪ್ರದಾಯಿಕ ಮತ್ತು ಆಧುನಿಕ ಆಚಾರ ವಿಚಾರಗಳ ನಡುವೆ ಬದುಕು ನಡೆಸುವ ಹೆಣ್ಣು ತನ್ನ ಅಸ್ತಿತ್ವವನ್ನು ಸ್ವತಂತ್ರಿಕೆಯನ್ನು ಹೊಂದುವ ಪ್ರಯತ್ನಗಳ ಉಲ್ಲೇಖವಿದೆ. ಪುರುಷವಾದವನ್ನು ಅಳಿಸಿ ಹಾಕಿ ಆ ಸ್ಥಳದಲ್ಲಿ ಸ್ತ್ರೀಪರ ನಿಲುವನ್ನು ಸ್ಥಾಪಿಸುವ ಐತಿಹಾಸಿಕ ಅನಿವಾರ್ಯತೆಯ ಕೆಲಸ ಮತ್ತು ಮಾಡಬೇಕಾದ ಸ್ತ್ರೀಯರು ಅವರ ಸ್ವರೂಪ ಅದರೊಳಗಿನ ದ್ವಂದ್ವ ಢಾಂಬಿಕತೆ ಇವೆಲ್ಲವೂ ಕೆಲವು ಕತೆಗಳಲ್ಲಿ ಬಂದಿವೆ. ನಿರಂಜನರ ಕತೆ ಇಂತಹ ಕಡೆಯಲ್ಲೆಲ್ಲ ಮತ್ತೊಂದು ಅತಿರೇಕವನ್ನೇ ಸೃಷ್ಟಿಸಿ ಬಿಡುತ್ತದೆ. ಎಲ್ಲರ ಕೆಲಸಗಳೂ ಸಮಾನತೆಯ ಸಮಾಜ ಸ್ಥಾಪನೆಗಾಗಿ ಎಂಬ ಅಂಶ ಕೊಂಚ ಮರೆಯಾಗುವಂತಾಗುತ್ತದೆ. ನಿರಂಜನರೊಳಗಿನ ಸ್ತ್ರೀಪರ ನಿಲುವು ತಾಯಿ

ಮುಖೇನ ಸಿಕ್ಕ ಸ್ವಾನುಭವ ವಿವರಗಳು ಪ್ರೇರಿಸಿದ ಸಂಗತಿಗಳು ಇವೆಲ್ಲ ನಿರಂಜನರನ್ನು ಇತರ ಪ್ರಗತಿಶೀಲ ಲೇಖಕರಿಗಿಂತ ಹೆಚ್ಚು ಸ್ತ್ರೀಪರ ಎಂದು ಒಡೆದು ತೋರಿಸುತ್ತದೆ.

ಗಂಡಿನ ಲಂಪಟತೆ ಅದರಲ್ಲೂ ಮುಖ್ಯವಾಗಿ ವಿವಾಹೇತರ ಸಂಬಂಧಗಳಲ್ಲಿ ಗಂಡಿನ ಆಸಕ್ತಿ ಇಂತಹುದು ನಿರಂಜನರ ಪ್ರಾರಂಭದ ಕತೆಯೊಂದರಲ್ಲಿ ಮಾತ್ರ ಕಾಣುತ್ತದೆ. ಇದನ್ನು ಬಿಟ್ಟಂತೆ ಇನ್ನಾವ ಕತೆಯಲ್ಲೂ ಈ ವಿಚಾರ ಕಾಣಿಸುವುದಿಲ್ಲ. ಗಂಡುಹೆಣ್ಣಿನ ಪ್ರೇಮ ಪ್ರಕರಣಗಳೂ ಪ್ರೇಮ ವಿವಾಹಗಳೂ ಇವರ ಕತೆಗಳಲ್ಲಿ ಬರುತ್ತವೆ. ಪ್ರೇಮಿಗಳ ಕನಸು ಅವರಿರುವ ನಿಜವಾದ ಪರಿಸ್ಥಿತಿಯ ವಾಸ್ತವಗಳು ಜೊತೆಜೊತೆಯಾಗಿಯೇ ಬಂದು ಅವರ ಸಂಧಿಗ್ಧಗಳನ್ನೂ ದಾಖಲಿಸುತ್ತವೆ. ಪ್ರೇಮ ವಿವಾಹಗಳ ಮೂಲಕ ಜಾತಿ , ವರ್ಗಗಳನ್ನು ಮೀರುವ ಮತ್ತು ಆ ಮುಖೇನ ಆರೋಗ್ಯಕರ ಸಮಾಜ ನಿರ್ಮಾಣದ ಆಶಯ ನಿರಂಜನರದು. ಗಂಡುಹೆಣ್ಣಿನ ಪ್ರೇಮ ಇಲ್ಲೆಲ್ಲ ಸರಾಗವಾಗಿಯೇ ನಡೆಯುತ್ತದೆಂದೇನಿಲ್ಲ. ಕೈಲಾಗದ ಅಸಹಾಯಕ ಸ್ವತಂತ್ರ ತೀರ್ಮಾನ ವ್ಯಕ್ತಿತ್ವವಿಲ್ಲದ ಗಂಡುಗಳೂ ಇವರ ಕತೆಯಲ್ಲಿದ್ದು, ಅಪ್ಪನ ವರದಕ್ಷಿಣೆಯ ಮೋಹವನ್ನು ವಿರೋಧಿಸಲಾಗದೇ ಪ್ರೇಮ ಸಂಬಂಧವನ್ನೇ ಕೈ ಬಿಡುವ ಚಿತ್ರಣವೂ ಇದೆ. ಇಂಥ ಕಡೆ ಇರಬೇಕಾದ ಧೈರ್ಯ ಇಲ್ಲವೆಂದೇ ಕತೆ ಹೇಳುತ್ತದೆ. ಪ್ರೇಮಿಗಳಿಬ್ಬರು ತಮ್ಮ ಮದುವೆಗೆ ಹಿರಿಯರು ಮಾಡುವ ಅಡೆತಡೆಗಳನ್ನು ಸಹಿಸಲಾರದೆ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ.

ಪ್ರೇಮ ವಿವಾಹದಲ್ಲೂ ಗಂಡನ ಸ್ವಭಾವ ವೈಚಿತ್ರ್ಯದ ಕಾರಣವಾಗಿ ಹೆಂಡತಿಯು ಎದುರಿಸಬೇಕಾದ ಬಿಕ್ಕಟ್ಟುಗಳನ್ನು ಕನಸಿನ ಪ್ರತಿಮಾ ವಿಧಾನದಲ್ಲಿ ಹೇಳುವ ಕತೆಯೊಂದಿದೆ. ಇಂತಹುದನ್ನು ನೇರವಾಗಿಯೇ ನಿರೂಪಿಸಲು ಅವರು ಹಿಂಜರಿಯುತ್ತಾರೆಯೇ ಎಂಬುದು ತಿಳಿಯುವುದಿಲ್ಲ. ತ್ರಿಕೋನ ಪ್ರೇಮವಿರುವ ಕತೆಯೊಂದಿದೆ. ಇಂತಹ ಸಂದರ್ಭದಲ್ಲಿ ದುರಂತವಾಗುವ ಸಾಧ್ಯತೆಗಳಿತ್ತಾದರೂ ಈ ಕತೆಯಲ್ಲಿ ಆದಾಗದೇ ಒಬ್ಬಳ ತ್ಯಾಗ ಮತ್ತೊಬ್ಬಳ ಬದುಕಿಗೆ ಅನುವು ಮಾಡಿಕೊಡುತ್ತದೆ. ಅನ್ಯಜಾತಿ ಎಂಬ ಕಾರಣಕ್ಕಾಗಿ ಗಂಡಿನ ಪ್ರೇಮವೊಂದು ಮರುಕಿ ಹೋದ ಸಂಗತಿಯಿದೆ. ಕೆಲವು ಕತೆಗಳಲ್ಲಿ ಸ್ತ್ರೀ ವಿಕಸನದ ಚೈತನ್ಯ ಬೆರಗಾಗುವಂತೆ ಮಾಡಿದೆ. ಅವಳ ಸಾಧನೆ ಎದುರಾದ ತೊಡಕುಗಳು ಸಹಿಸದ ಮನಸ್ಸು ಸಾಧಿಸಿದ ಯಶಸ್ಸು ಎಲ್ಲವೂ ದಾಖಲಾಗಿವೆ. ಪ್ರಣಯಿಯೊಬ್ಬನನ್ನು ಹೊಂದುವ ತೀವ್ರ ಬಯಕೆಯಿಂದ ಕುರೂಪಿ ಹೆಣ್ಣೊಬ್ಬಳು ವಿಕೃತ ನೆಲೆಗಳಲ್ಲಿ ಬದುಕುವ ಸಂಗತಿಯೊಂದು ಕತೆಯಲ್ಲಿದೆ. ಗಂಡ ಹೆಂಡತಿಯ ದಾಂಪತ್ಯ ಚೌಕಟ್ಟಿನ ಸರಸವಿರಸಗಳು ನವಿರಾಗಿದೆ. ಸುಖಕರ ಯಶಸ್ವಿ ದಾಂಪತ್ಯ ಲಕಲಕನೆ ಹೊಳೆಯುವ ನಗುವಿನೊಂದಿಗೆ ಚಿತ್ರಿತವಾಗುವ ನಿರಂಜನರ ಕತೆಗಳು ಕೇವಲ ತೊಡಕುಗಳನ್ನು ಕಾಣುವ ದೃಷ್ಟಿ ತನ್ನದಲ್ಲ ಎಂದು ಸಾರಿ ಹೇಳುತ್ತವೆ. ಗಂಡನಿರದ ಸ್ತ್ರೀಯೊಬ್ಬಳು ತನ್ನ ಸ್ತ್ರೀ ಸಹಜ ಕಾಮನೆಗಳಿಂದಾಗಿ ಹಾದರ ನಡೆಸಿ ತನ್ನ ಜೀವನದಿಂದ ಬೇಸತ್ತು ಆತ್ಮಹತ್ಯೆ ಮಾಡಿಕೊಳ್ಳುವ ವಿಚಾರ

ಕತೆಯೊಂದರಲ್ಲಿ ಬಂದಿದೆ. ಅದರ ಮೂಲಕ ಅವಳ ಮಗನ ಬದುಕು ಅಸ್ತವ್ಯಸ್ತಗೊಳ್ಳುತ್ತದೆ. ಮುಸ್ಲಿಂ ಸಮುದಾಯದ ಕಟ್ಟುಪಾಡುಗಳು ಹಾಗೂ ಸಮಾಜದ ಒತ್ತಡಗಳು ಇವನ್ನು ಯಶಸ್ವಿಯಾಗಿ ದಾಟಿ ಪ್ರಗತಿಪರ ದಿಕ್ಕಿನಲ್ಲಿ ಸಾಗಿದ ಮಹಿಳೆಯ ಚಿತ್ರವಿದೆ. ಇದು ನಿರಂಜನರಂತಹ ಕಥೆಗಾರರನ್ನು ಮಾತ್ರ ಕಾಡಿದ ಅಂಶ. ಒಂದು ಕತೆಯಲ್ಲಂತೂ ಇದೇ ಪ್ರಮುಖ ವಸ್ತುವಾಗಿದೆ. ಮಾನವೀಯ ಪ್ರಶ್ನೆ ಮತ್ತು ಬದುಕಿನ ವಾಸ್ತವಗಳು ಇವುಗಳ ವಿಚಾರದಲ್ಲಿ ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿದ ಸಂವೇದನಾಶೀಲ ಮಹಿಳೆಯ ಮಾನಸಿಕ ಒತ್ತಡ ಸನ್ನಿವೇಶಗಳನ್ನು ಎದುರಿಸಿದ ಬಗೆ ಎಲ್ಲ ಸಹಜವಾಗಿ ಬಂದಿವೆ. ಕ್ರೂರ ವಾಸ್ತವಗಳು ಹೆಣ್ಣನ್ನು ದುಡಿಯುವ ಅನಿವಾರ್ಯತೆಗೆ ತಳ್ಳುತ್ತದೆ. ಅವಳ ಕನಸು ಬದುಕಿನ ಭವಿಷ್ಯ ಅನಿರ್ದಿಷ್ಟವಾಗುತ್ತವೆ. ಇಲ್ಲೆಲ್ಲ ವರ್ಗ ಮತ್ತು ಲಿಂಗ ಪ್ರಶ್ನೆಯು ಒಟ್ಟಿಗೆ ದಾಖಲಾಗಿದೆ. ಒಟ್ಟು ಪ್ರಗತಿಶೀಲರಲ್ಲೇ ಇಂತಹ ವರ್ಗನೆಲೆಯ ಜಿಗುಪ್ಸೆ ಅವಮಾನಗಳ ಅನಾವರಣ ಆಗಿರುವುದು ನಿರಂಜನರಲ್ಲಿ ಮಾತ್ರ. ಇದಕ್ಕೂ ಅವರು ಸ್ಪಂದಿಸಿದ್ದಾರೆ ಎಂಬುದು ಮಹತ್ವದ ವಿಚಾರ.

ಚದುರಂಗರ ವರ್ಗನೆಲೆಯ ಕತೆಗಳು ಕಡಿಮೆ ಸಂಖ್ಯೆಯವು. ಅವು ಕೂಡ ಕತೆಯ ಬೇರೆ ಬೇರೆ ಆಶಯ, ನೆಲೆಗಳೊಂದಿಗೆ ಸೇರಿಕೊಂಡ ಒಂದಂಶವಾಗಿಯಷ್ಟೇ ಕಾಣುತ್ತವೆ. ಅಂದರೆ ಕಟ್ಟಿಮನಿ, ನಿರಂಜನ ಕತೆಗಳಲ್ಲಾದಂತೇ ನಿರ್ದಿಷ್ಟವಾಗಿಯೇ ಹೊರಟು ನಿರ್ದಿಷ್ಟ ಪರಿಣಾಮ ತೀರ್ಮಾನಗಳನ್ನು ಕೊಡುವ ಸ್ವರೂಪದ ವರ್ಗಸಂಬಂಧಿ ವಿಚಾರಗಳು ಇಲ್ಲಿಲ್ಲ.

ಕುಟುಂಬದ ಒಗ್ಗೂಡುವಿಕೆ ಮತ್ತು ವಿಘಟನೆಯ ಸಂದರ್ಭಗಳಲ್ಲಿ ಆರ್ಥಿಕನೆಲೆ ಹೇಗೆ ಮಾನದಂಡವಾಗಿ ಬಿಡುತ್ತದೆಂಬ ಅಂಶ ಅನಾವರಣವಾಗಿದೆ. ಆ ಮೂಲಕ ಉಳ್ಳ, ಉಳ್ಳದ ಎಂಬ ಗುಂಪುಗಳು ಕುಟುಂಬದಲ್ಲೇ ಸೃಷ್ಟಿಗೊಂಡು ಪರಸ್ಪರ ಮುಖಾಮುಖಿಗೊಳ್ಳುತ್ತವೆಂಬ ವಿಚಾರ ವ್ಯಕ್ತವಾಗಿದೆ. ಬಡವ - ಶ್ರೀಮಂತ ಎಂಬ ವೈದೃಶ್ಯ ನಿರ್ಮಾಣದಲ್ಲೇ ಮಕ್ಕಳ ಮನಸ್ಸಿನ ಮೂಲಕ ವರ್ಗತಾರತಮ್ಯವನ್ನು ಹೇಳುವ ಶೈಲಿಯಿದೆ. ಇಲ್ಲೆಲ್ಲ ಉಳ್ಳವರ ಬಗ್ಗೆ ಉಳ್ಳದವರು ಇಟ್ಟುಕೊಳ್ಳಬೇಕಾದ ಸಾಮಾಜಿಕ ಭೀತಿಯನ್ನು ಹೇಳಲಾಗಿದೆ. ಚದುರಂಗರು ಪ್ರಗತಿಶೀಲ ಸಾಹಿತ್ಯ ಚಳುವಳಿ ಪ್ರಖರವಾಗಿದ್ದ ದಿನಗಳಲ್ಲಿ ಬರೆದ ಒಂದಷ್ಟು ಕತೆಗಳು ವರ್ಗನೆಲೆಯನ್ನು ಹೇಳುತ್ತವೆ. ಬಡತನ ಮತ್ತು ಅರಕ್ಷಿತ ಔದ್ಯೋಗಿಕ ನೆಲೆಗಳು ಮತ್ತಷ್ಟು ಹಿಂಸೆಗೆ ಗುರಿಮಾಡುವಲ್ಲಿಯೂ ಮನುಷ್ಯನ ಬದುಕುಆಶಾವಾದಿಯಾಗಿ ಇರಬಲ್ಲುದೆಂಬ ಅಂಶವನ್ನು ಅವರ ಕತೆಯೊಂದು ಹೇಳುತ್ತದೆ. ಜಮೀನ್ದಾರರ ಕ್ರೌರ್ಯ ಮತ್ತದರ ಪರಿಣಾಮವಾಗಿ ತುಂಡುಬೇಸಾಯಗಾರನ ಕುಟುಂಬ ದುರಂತ ಕತೆಯೊಂದರಲ್ಲಿ ವ್ಯಕ್ತವಾಗಿದೆ. ಸಾಮಾಜಿಕ ಅಸಮಾನತೆಗಳು ಮತ್ತು ವ್ಯವಸ್ಥೆಯ ವೈಫಲ್ಯಗಳು ಶೋಷಿತ ಜನರನ್ನು ಇನ್ನಷ್ಟು ಅಧಃಪತನಕ್ಕೆ ಗುರಿಮಾಡುತ್ತವೆಂಬುದನ್ನು ಚದುರಂಗರು ವಿಡಂಬನೆಯ ಮೂಲಕ ಹೇಳುತ್ತಾರೆ.

ಚದುರಂಗರ ಏಕಪ್ರಶ್ನೆಯ ಕತೆಗಳಿಗಿಂತ ಲಿಂಗಪ್ರಶ್ನೆಯ ಕತೆಗಳೇ ಹೆಚ್ಚು ಗಂಭೀರವಾಗಿವೆ ಮತ್ತು ಮಹತ್ವದ್ದಾಗಿವೆ. ಅವಿಭಕ್ತ ಕುಟುಂಬದೊಳಗಿನ ಸಾಮರಸ್ಯ ಸ್ತ್ರೀಶಕ್ತಿಗಳ ಮೂಲಕವೇ ವಿಘಟಿತಗೊಳ್ಳುವುದು.

ಸಮೂಹ ಬದುಕಿನ ಸುಖ ನೆಮ್ಮದಿಗಳ ಅರಿವಾಗಿ ತಪ್ಪು ತಿದ್ದಿಕೊಳ್ಳುವುದು ಇವರ ಕತೆಗಳಲ್ಲಿದೆ. ಇಂಥಲ್ಲಿ ಪುರುಷ ಸಂಪರ್ಕವಿಲ್ಲ. ತನ್ನ ಮಗಳು ವಿಧವೆಯಾದಳಲ್ಲ ಎಂದು ಹಲುಬುವ ತಂದೆಯ ಚಿತ್ರವಿದೆ. ದಾಂಪತ್ಯ ಜೀವನದಲ್ಲಿ ಹೆಂಡತಿಯಾದವಳು ಗಂಡನ ನುಡಿ ನಡವಳಿಕೆಯನ್ನು ತಪ್ಪಾಗಿ ತಿಳಿಯುವುದು ಅದರ ಮೂಲಕ ಆಗುವ ಕುಟುಂಬನಾಶ ಮತ್ತು ವ್ಯಕ್ತಿ ದುರಂತ ಎರಡು ಬಂದಿವೆ. ಹಾಗೆಯೇ ಗಂಡನ ನಡವಳಿಕೆಯನ್ನು ತಪ್ಪಾಗಿ ಗ್ರಹಿಸಿದ ಹೆಂಡತಿ ವಾಸ್ತವಗಳನ್ನು ಅರಿತು ತನ್ನ ಗ್ರಹಿಕೆಯ ದೋಷವನ್ನು ಸರಿಪಡಿಸಿಕೊಳ್ಳುತ್ತಾಳೆ. ಇಲ್ಲೆಲ್ಲ ಹೆಣ್ಣು ಮತ್ತು ಗಂಡು ಇಬ್ಬರ ಒಳತೋಟಿಗಳು ಕತೆಯಲ್ಲಿ ಬಂದು ಆ ಮೂಲಕ ಕತೆಯ ಚೌಕಟ್ಟು ನಿರ್ದಿಷ್ಟ ಹಿಡಿತಕ್ಕೆ ಸಿಕ್ಕುತ್ತದೆ. ವಿವಾಹ ಪೂರ್ವ ಮತ್ತು ವಿವಾಹೋತ್ತರ ಲೈಂಗಿಕ ಸಂಬಂಧಿಗಳ ಚಿತ್ರಣ ತನ್ನೆಲ್ಲ ಸಮರ್ಥ ಹಿನ್ನೆಲೆ ಆಯಾಮಗಳೊಂದಿಗ ಅಭಿವ್ಯಕ್ತಗೊಂಡಿದೆ.

ಸಾಮಾಜಿಕ ನೀತಿ ಸಂಹಿತೆಗಳು ಗಂಡು ಹೆಣ್ಣಿನ ಲೈಂಗಿಕ ಬದುಕನ್ನು ನಿಯಂತ್ರಿಸುವ ಸಂದರ್ಭದಲ್ಲಿ ವಿವಾಹ ಪೂರ್ವದ ಮತ್ತು ವಿವಾಹೋತ್ತರದ ಸಂಬಂಧಗಳು ಬಿಟ್ಟುಕೊಡುವ ಹಲವು ಅರ್ಥಗಳು ಕತೆಯ ಕಲಾತ್ಮಕತೆಗೆ ದಕ್ಕೆ ತರದ ರೀತಿಯಲ್ಲಿ ಬಂದಿವೆ. ಈ ರೀತಿಯ ಸಂಬಂಧ ಚಿತ್ರವು ಆರೋಗ್ಯಕರ ಮತ್ತು ಮಾನವೀಯ ನೆಲೆಯಲ್ಲಿ ಇರಬೇಕೆಂಬ ಲೇಖಕರ ಆಶಯದೊಂದಿಗೆ ಬಂದಿದೆ. ಹೀಗಾಗಿ ಚದುರಂಗರು ಇಂಥ ಸಂದರ್ಭದಲ್ಲಿ ಅನೈತಿಕ, ಅಕ್ರಮ ಎಂದಷ್ಟೆ ಹೇಳದೆ ವಾಸ್ತವಗಳ ದರ್ಶನ ಮಾಡಿಸುತ್ತಾರೆ. ಸಂಬಂಧಗಳು ಇರಬೇಕಾದ ರೀತಿಯನ್ನು ಹೇಳುತ್ತಾರೆ.

ಬುದ್ಧಿ, ಬದುಕುಗಳ ಅರಿವಿದ್ದ ಹೆಣ್ಣನ್ನು ಬಳಸಿಕೊಳ್ಳುವ ಪುರುಷ ಸಮಾಜ ಮತ್ತು ಆ ಮೂಲಕ ಹೆಣ್ಣು ತನಗೆ ಅದುವರೆಗೂ ದಕ್ಕದಂತೆ ಮಾಡಿದ್ದ ಅನುಭವಗಳನ್ನು ಆಸ್ವಾಧಿಸುವ ರೀತಿ ಇವು ಪಾತ್ರ ಸಂಕೀರ್ಣಕ್ಕು ಕತೆಯ ಒಳಾರ್ಥಕ್ಕೂ ದಾರಿ ಮಾಡಿಕೊಡುತ್ತವೆ. ವಿವಾಹ ವ್ಯವಸ್ಥೆಯನ್ನು ಧಿಕ್ಕರಿಸಿ ಬದುಕುವ ಹೆಣ್ಣಿನ ಚಿತ್ರ ಇಡೀ ಪ್ರಗತಿ ಶೀಲರ ಸಂದರ್ಭದಲ್ಲಿ ವಿಶೇಷವಾದುದು, ನಿರಂಜನ ಮತ್ತು ಚದುರಂಗರಲ್ಲಿ ಮಾತ್ರ ಕಾಣುವಂಥದು. ನಿರಂಜನರಲ್ಲಿ ಸಾಮಾಜಿಕ ಹಿಡಿತವನ್ನು ಯಶಸ್ವಿಯಾಗಿ ಎದುರಿಸಿದ ವಿಧವೆಯ ಉತ್ಕ್ರಮಣದಲ್ಲಿ ಇದನ್ನು ಕಂಡರೆ ಚದುರಂಗರಲ್ಲಿ ಸಾಮಾಜಿಕ ಬಂಧನಗಳ ಹಂಗನ್ನೇ ತೊರೆದು ಜೀವಿಸುವ ಹೆಣ್ಣಿನ ಸಂಕ್ರಮಣದಲ್ಲಿ ಕಾಣುತ್ತೇವೆ. ಇವರ ಒಂದೆರಡು ಕತೆಗಳಲ್ಲಿ ವೇಶ್ಯಾಜೀವನದ ವಿವರವಿದೆ. ಇಂಥ ವಿವರಗಳು ನಿರಂಜನರಲ್ಲಿ ಬಂದಂತೆ ಇತರ ಆಯಾಮಗಳನ್ನು ಕಾಣಿಸಿಕೊಡುವುದಿಲ್ಲ.

ಚದುರಂಗದಲ್ಲಿ ಕೂಡ ಕಟ್ಟಿಮನಿಯಂತೆ ಜಾತಿಪ್ರಜ್ಞೆಯ ವಿಚಾರಗಳು ಕತೆಯ ಸಂದರ್ಭದಲ್ಲಿ ಮಹತ್ವ ಪಡೆಯುವುದಿಲ್ಲ.

ಅನಕೃ ಕತೆಗಳಲ್ಲಿ ವರ್ಗನೆಲೆ ತೀರಾ ವಿರಳ 'ಅನ್ನದ ಕೂಗು' ಕತೆಯೊಂದರಲ್ಲಿ ಮಾತ್ರ ಕೃತಕ ಕ್ಷಾಮ

ಮತ್ತು ಸಾಮ್ರಾಜ್ಯಶಾಹೀ ನೀತಿಗಳು ಕುಟುಂಬಗಳ ಮೇಲೆ ಮಾಡುವ ಪರಿಣಾಮವನ್ನು ಹೇಳಲಾಗಿದೆ. ದಾಂಪತ್ಯಬಿರುಕು - ಪುನರ್ ಹೊಂದಾಣಿಕೆ, ಗಂಡನಿಗೆ ದ್ರೋಹ ಬಗೆದು ಹೆಂಡತಿ ಮತ್ತೊಬ್ಬನೊಡನೆ ಹೋಗುವುದರ ಮೂಲಕ ಕುಟುಂಬದ ಛಿದ್ರೀಕರಣ, ಗಂಡನ ದೊಡ್ಡತನ, ಮತ್ತೆ ಕುಟುಂಬದ ನಿರ್ಮಾಣ, ಪ್ರತಿಭಾವಂತ ಹುಡುಗರನ್ನು ದಾರಿ ತಪ್ಪಿಸಿ ಅವರ ಭವಿಷ್ಯವನ್ನು ಕತ್ತಲು ಮಾಡುವ ಹೆಣ್ಣು, ಗಂಡು ಹೆಣ್ಣಿನ ಮೇಲೆ ಮಾಡುವ ಬಲಾತ್ಕಾರ, ಪರಸ್ಪರ ಪುರುಷರಲ್ಲಿರುವ ಸಲಿಂಗ ಪ್ರೇಮ ಹೀಗೆ ಅನಕೃ ಕತೆಗಳಲ್ಲಿ ಲಿಂಗಸಂಬಂಧದ ನೆಲೆಗಳು ಪರಸ್ಪರ ಘರ್ಷಿಸುತ್ತವೆ.

ತರಾಸು ಕತೆಗಳಲ್ಲಿ ವರ್ಗ ಮತ್ತು ಲಿಂಗ ಪ್ರಜ್ಞೆಗಳು ಸರ್ವಸಮನಾಗಿ ಬಂದಿವೆ. ತರಾಸು ಕೂಡ ಹಸಿವು ಬಡತನಗಳಿಂದ ನರಳುವ ಕೆಳವರ್ಗದ ಜನತೆಯು ಉಳ್ಳವರ ದೌರ್ಜನ್ಯ, ಶೋಷಣೆಗಳಿಗೆ ನಿರಂತರ ತುತ್ತಾಗುವ ಚಿತ್ರಣಗಳನ್ನೇ ನೀಡಿದ್ದಾರೆ. ಶೋಷಿತ ಪರ ನಿಲುವು ಸಾನುಕಂಪವಾಗಿ ಮಾರ್ಪಟ್ಟಿದೆ. ಎಂಬಾ ನಾಜೂಕಿನಲ್ಲಿ ನಡೆಯುವ ಇಂಥ ಸಾಮಾಜಿಕ ಅನ್ಯಾಯಗಳು ಬಡಜನತೆಯ ಅರಣ್ಯರೋಧನವಾಗಿ ಅವರ ಸ್ಥಿತಿ ಹೀಗೆ ಏಷ್ಟುಕಾಲ ನರಕವಾಗಿಯೇ ಇರಬೇಕು? ಎಂಬಂಥ ಪ್ರಶ್ನೆಗಳನ್ನು ಕೇಳುತ್ತಾರೆ ಬೌದ್ಧಿಕ  ಗುಲಾಮಗಿರಿಯ ಸ್ವರೂಪವನ್ನು ತರಾಸು ಅವರು ಕತೆಯೊದರಲ್ಲಿ ದೀರ್ಘವಾಗಿಯೇ ವಿಶ್ಲೇಷಿಸಿದ್ದಾರೆ.

ತರಾಸು ಅವರ ಪ್ರಾರಂಭದ ಬಹುಪಾಲು ಕತೆಗಳೆಲ್ಲಗಂಡು ಹೆಣ್ಣಿನ ವಿವಾಹೇತರ ಸಂಬಂಧಗಳ ಚಿತ್ರಣಕ್ಕೆ ಮೀಸಲಾಗಿದೆ. ಕಾರ್ಯಲೋಲುಪತೆ ಮತ್ತು ಬೋಗಲಾಸೆಗಳನ್ನು ವಿಜೃಂಬಿಸುವ ಇಂಥ ಬರವಣಿಗೆಗಳುಓದುಗರ ಕ್ಷಣಿಕ ತೃಪ್ತಿಗಾಗಿಯೇ ಹೊಸೆಯಲ್ಪಟ್ಟವೆಂದು ತಿಳಿದು ಬಿಡುತ್ತದೆ. ಭಾವೋದ್ರೇಕವನ್ನು ಎಲ್ಲೆ ಮೀರಿ ಮೀಟುವ ಇಂಥ ಕಡೆ ತರಾಸು ಲಿಂಗ ಸಂಬಂಧಗಳ ವಿವೇಚನೆಗೆ ತೊಡಗುವುದೇ ಇಲ್ಲ. ಹೆಣ್ಣಿರುವದೇ ಗಂಡನ ಭೋಗಕ್ಕಾಗಿ ಎಂಬ ಅಪಾಯಕಾರಿ ತೀರ್ಮಾನಗಳು ಇಲ್ಲವೇ ದಾಂಪತ್ಯ ವಲಯದ ಕೆಲವು ಕತೆಗಳಲ್ಲಿ ಕೌಟುಂಬಿಕ ಶಾಂತಿ ನೆಮ್ಮದಿಗಳನ್ನು ಕೀರ್ತಿಸಲಾಗಿದೆ. ಗಂಡಿನ ಕುಟುಂಬೇತರ ಆಸಕ್ತಿಗಳು ನೀರಮೇಲಿನ ಗುಳ್ಳೆಯಂತೆ ಹುಸುಯಾಗುತ್ತವೆ ಎಂಬುದನ್ನು ತೋರಿಸಲು ಯತ್ನಿಸಲಾಗಿದೆ. ಪ್ರೇಮ ದುರಂತ ಹೆಣ್ಣಿನ ಸೌಂದರ್ಯದ ಅಶಾಶ್ವತತೆ ಮೊದಲಾದ ಸಂಗತಿಗಳೂ ತರಾಸು ಅವರ ಲಿಂಗ ಸಂಬಂಧೀ ದೃಷ್ಟಿಕೋನ ಪುರುಷ ಪರವಾದದ್ದು ಸ್ತ್ರೀ ವಿಕಸನ ಸಾಧ್ಯತೆಗಳಾಗಲೀ ಪುರುಷ ಅಹಂಕಾರದ ದಮನಗಳಾಗಲಿ ತರಾಸು ಅವರ ಕತೆಗಳು ಗಮನಕ್ಕೆ ತಂದುಕೊಡಲಿಲ್ಲ.

೧. ಬಸವರಾಜ ಕಟ್ಟೀಮನಿ, ಸೆರೆಯಿಂದ ಹೊರಗೆ, ಶಾರದಾ ಪ್ರಕಾಶನ, ಬೆಂಗಳೂರು, ೧೯೪೯, ಪುಟ ೪೮

೨. ಲಕ್ಕಪ್ಪಗೌಡ ಎಚ್.ಜಿ., ಅಸಮಾನ್ಯ ಸಾಧನೆ ಕಟ್ಟೀಮನಿ : ಬದುಕು ಬರಹ ಗೀತಾ ಬುಕ್‌ಹೌಸ್ ಮೈಸೂರು ೧೯೬೯, ಪು. ೮೨೩.

೩. ಶೇಷಗಿರಿ ರಾವ್ ಎಲ್.ಎಸ್., ತುಷಾರ ಏಪ್ರಿಲ್ ೧೯೯೩, ಪು. ೧೧೩

೪. ಲಕ್ಕಪ್ಪಗೌಡ ಎಚ್.ಜಿ., ಅಸಮಾನ್ಯ ಸಾಧನೆ ಕಟ್ಟೀಮನಿ ಬದುಕು ಬರಹ, ಗೀತಾ ಬುಕ್ ಹೌಸ್ ಮೈಸೂರು ೧೯೬೯, ಪು. ೧೨೩

೫. ಶೇಷಗಿರಿ ರಾವ್, ಎಲ್.ಎಸ್. ತುಷಾರ, ಜೂನ್ ೧೯೯೩. ಪು. ೧೦೪

೬. ಶೇಷಗಿರಿ ರಾವ್, ಎಲ್.ಎಸ್. ತುಷಾರ, ಜೂನ್ ೧೯೯೩. ಪು. ೧೦೫

೭. ಸುಂದರಮ್ಮ, ಚದುರಂಗರ ಕಥಾ ಸಾಹಿತ್ಯ ಒಂದು ಅಧ್ಯಯನ (ಅಪ್ರಕಟಿತ ನಿಬಂದ) ಮೈಸೂರು ವಿಶ್ವ ವಿದ್ಯಾಲಯ, ಪು. ೬೪

೮. ಸುಂದರಮ್ಮ, ಚದುರಂಗರ ಕಥಾ ಸಾಹಿತ್ಯ ಒಂದು ಅಧ್ಯಯನ (ಅಪ್ರಕಟಿತ ನಿಬಂದ) ಮೈಸೂರು ವಿಶ್ವ ವಿದ್ಯಾಲಯ, ಪು. ೫೭

೯. ನಿರಂಜನ ಸೀಮಂತಿನಿ, (ಸಂ.) ಧ್ವನಿ ಸಂ.೧, ಐ.ಬಿ.ಹೆಚ್. ಪ್ರಾಕಾಶನ ಬೆಂಗಳೂರು ೧೯೮೯. ಪು. ೭೮

೧೦. ನಿರಂಜನ ಸೀಮಂತಿನಿ, (ಸಂ.) ಧ್ವನಿ ಸಂ.೧, ಐ.ಬಿ.ಹೆಚ್. ಪ್ರಾಕಾಶನ ಬೆಂಗಳೂರು ೧೯೮೯. ಪು. ೧೨೪

೧೧. ಬಿದರವಹಳ್ಳಿ ನರಸಿಂಹ ಮೂರ್ತಿ ಪ್ರವೇಶ ಧ್ವನಿ, ಸಂಪುಟ ೧, ಐ.ಬಿ.ಹೆಚ್. ಪ್ರಕಾಶನ, ೧೯೮೬. ಪು. ೪

೧೨. ನಿರಂಜನ ಸೀಮಂತಿನಿ (ಸಂ) ಧ್ವನಿ ಸಂ. ೧, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು ೧೯೮೬. ಪು.೩೩೪.

೧೩. ಬಿದರಹಳ್ಳಿ ನರಸಿಂಹ ಮೂರ್ತಿ, ಪ್ರವೇಶ ಧ್ವನಿ ಸಂಪುಟ ೧., ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು ೧೯೮೬. ಪು. ೧೭.

೧೪. ನಿರಂಜನ ಸೀಮಂತಿನಿ ಧ್ವನಿ ಸಂಪುಟ ೨, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು. ೧೯೮೬. ಪು. ೧೨೧೧.

೧೫. ಸುಬ್ರಾಯ ಚೋಕಾಡಿ ನಿರಂಜನ ಕಥಾ ಸಾಹಿತ್ಯ, ನಿರಂಜನಾ ಅಭಿನಂದನಾ ಗ್ರಂಥ, ಕರ್ನಾಟಕ ಸಂಘ, ಪುತ್ತೂರು, ೧೯೮೬, ಪುಟ ೨೧೭.

೧೬. ಶೇಷಗಿರಿ ರಾವ್, ಎಲ್.ಎಸ್. ತುಷಾರ, ಜೂನ್ ೧೯೯೩. ಪು. ೧೦೪

ಅಧ್ಯಾಯ-೫

# ಕನ್ನಡ ಪ್ರಗತಿಶೀಲ ಕಾದಂಬರಿ ಸಾಹಿತ್ಯದಲ್ಲಿ ವರ್ಗಪರಿಕಲ್ಪನೆ

ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಲ್ಲಿ ಇಂಗ್ಲೆಂಡಿನಲ್ಲಾದ ಕೈಗಾರಿಕಾ ಕ್ರಾಂತಿಯು ಜಾಗತಿಕ ಮಟ್ಟದಲ್ಲೆಲ್ಲಾ ವ್ಯಾಪಿಸಿ ಮಾನವ ಬದುಕಿಗೆ ಹೊಸ ಆಯಾಮವನ್ನು ಕಲ್ಪಿಸಿತು. ಕೈಗಾರಿಕಾ ಕ್ರಾಂತಿಯ ಫಲವಾಗಿ ಜಗತ್ತಿನಲ್ಲಿ ಬಂಡವಾಳಶಾಹಿಗಳು ಹಾಗೂ ಕಾರ್ಮಿಕರು ಎಂಬ ಎರಡು ವರ್ಗಗಳು ಜನ್ಮ ತಳೆದವು. ಮಾಲೀಕರ ಕಬಂಧಬಾಹುಗಳಿಗೆ ಸಿಲುಕಿದ ಕಾರ್ಮಿಕರು ಶೋಷಣೆಗೊಳಗಾದರು. ಇದನ್ನು ಪ್ರತಿಭಟಿಸಿ ಸಮಾನತೆಯ ತತ್ವದ ತಳಹದಿಯ ಮೇಲೆ ಸಮಾಜವೊಂದನ್ನು ನಿರ್ಮಾಣ ಮಾಡುವುದಕ್ಕಾಗಿ ಕಾರ್ಲ್ ಮಾರ್ಕ್ಸ್ ಟೊಂಕ ಕಟ್ಟಿ ನಿಂತು ತನ್ನ ತಾತ್ವಿಕ ವಿಚಾರಗಳ ಮೂಲಕ ಕಾರ್ಮಿಕ ವಲಯದಲ್ಲಿ ಜಾಗೃತಿಯನ್ನುಂಟು ಮಾಡಿದನು. ಮಾರ್ಕ್ಸ್‌ನ ವಿಚಾರಧಾರೆಗಳು ಜಗತ್ತಿನಾದ್ಯಂತ ವ್ಯಾಪಿಸಿ ಕಾರ್ಮಿಕ ವಲಯದಲ್ಲಿ ಒಂದು ಹೊಸ ಸಂಚಲನವನ್ನುಂಟು ಮಾಡಿದವು. ಬುದ್ಧಿಜೀವಿಗಳು ಬರಹಗಾರರು ಮಾರ್ಕ್ಸ್ ತತ್ವಗಳನ್ನು ಬೆಂಬಲಿಸಿ ಕಾರ್ಮಿಕರಿಗೆ ಮಾಲೀಕರಿಂದಾಗುತ್ತಿದ್ದ ಶೋಷಣೆಯನ್ನು ಕುರಿತು ಅಧಿಕೃತವಾಗಿ ಬರೆಯತೊಡಗಿದರು. ಸಾಮಾಜಿಕ ಬದ್ಧತೆಯನ್ನು ತಮ್ಮ ಹೊಣೆಗಾರಿಕೆಯನ್ನಾಗಿಸಿಕೊಂಡ ಹಲವು ಬರಹಗಾರರು ಶೋಷಣೆರಹಿತ ಸಮಾನತೆಯ ಸಮಾಜವೊಂದು ಸ್ಥಾಪಿತವಾಗಬೇಕೆಂಬ ಮಹದುದ್ದೇಶದಿಂದ ಸಮಾಜದಲ್ಲಿ ವಿಜೃಂಭಿಸುತ್ತಿದ್ದ ಶೋಷಣೆ ಹಿಂಸೆ, ಸ್ವಾರ್ಥ, ಕಪಟತನ , ಬಡತನಗಳನ್ನು ವಿಡಂಬಿಸಿತೊಡಗಿದರು. ೨೦ನೇಯ ಶತಮಾನದ ಮಧ್ಯಭಾಗದಲ್ಲಿ ಮಾರ್ಕ್ಸ್‌ವಾದವು ಭಾರತಕ್ಕೆ ಪದಾರ್ಪಣೆ ಮಾಡಿ ಕನ್ನಡ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿತು. ಪ್ರಗತಿಪರ ಚಿಂತನೆಗಳನ್ನು ಹೊಂದಿದ್ದ ಬರಹಗಾರರು ಕಾರ್ಮಿಕರ, ಸ್ತ್ರೀಯರ, ದಲಿತರ, ಶೋಷಣೆ, ವೇಶ್ಯಾ ಸಮಸ್ಯೆ, ಪಟ್ಟಭದ್ರ ರಾಜಕೀಯ ಹಿತಾಸಕ್ತಿಗಳನ್ನು ತಮ್ಮ ಕೃತಿಗಳಿಗೆ ವಸ್ತುವನ್ನಾಗಿಸಿಕೊಂಡು ಅವುಗಳನ್ನು ಅಲ್ಲಿನ ವಿಷಮತೆಯನ್ನು ನಿರ್ದಾಕ್ಷಿಣ್ಯವಾಗಿ ಅನಾವರಣ ಮಾಡಿದರು.

ಕನ್ನಡ ಸಾಹಿತ್ಯದಲ್ಲಿ ವರ್ಗ ಸಂಘರ್ಷದ ಸಮಸ್ಯೆಯನ್ನು ವಸ್ತುವಾಗಿಸಿಕೊಂಡು ಹಲವಾರು ಕೃತಿಗಳು ಮೂಡಿಬಂದಿವೆ. ಈ ಒಂದು ಧೋರಣೆಯನ್ನು ಮೂಲದ್ರವ್ಯವನ್ನಾಗಿಸಿಕೊಂಡಿರುವ ಕಟ್ಟೀಮನಿಯವರ 'ಜ್ವಾಲಾಮುಖಿಯ ಮೇಲೆ ಹಾಗೂ ಬಂಡಾಯ ಕಾದಂಬರಿಗಳು ವಿಶಿಷ್ಟವೂ ಪ್ರಮುಖವೂ ಆದ ಕೃತಿಗಳು.

ಕಟ್ಟೀಮನಿಯವರ ಕಾದಂಬರಿಯು ಸ್ವಾತಂತ್ರ್ಯಾನಂತರದ ಭಾರತದಲ್ಲಿ ಕಂಡು ಬಂದ ರಾಜಕೀಯ ಪರಿಸ್ಥಿತಿ ಸಾಮಾಜಿಕ ಸ್ಥಿತಿಗತಿ ಕಾರ್ಮಿಕರ ಹೋರಾಟದ ಪರಿಮಿತಿಗಳನ್ನು ಶೋಧಿಸಿ ಹೊರಗೆಡಹಿದೆ ಬಲ್ಲಾಳರ ಕಾದಂಬರಿಯು ಮುಂಬೈನ ಕಾರ್ಮಿಕ ವಲಯವನ್ನು ತನ್ನ ಕೇಂದ್ರ ಸ್ಥಾನವನ್ನಾಗಿಸಿಕೊಂಡು ಕಾರ್ಮಿಕರ ಹೋರಾಟ, ಮಾಲೀಕರ ದೌರ್ಜನ್ಯ, ಕಾರ್ಮಿಕ ನಾಯಕತ್ವದ ಅರಾಜಕತೆ, ಅನಿವಾರ್ಯವಾದ ಹಿಂಸೆ ಇವನ್ನೆಲ್ಲ ಶೋಧನಾ ತತ್ತ್ವದಿಂದ ಹೊರಗೆಡಹಿದೆ. ಎರಡೂ ಕಾದಂಬರಿಗಳಲ್ಲಿ ಕಾರ್ಮಿಕರ "ದಾರುಣ ಬದುಕಿನ ಚಿತ್ರಣವಂತೂ

ಮನಕಲಕುವ ಹಾಗೆ ಮೂಡಿಬಂದಿದೆ. ಇನ್ನೊಂದೆಡೆ ಬಂಡವಾಳಶಾಹಿಗಳ ವೈಭವದ ಬದುಕಿನ ಚಿತ್ರಣವು ಅಷ್ಟೇ ವಾಸ್ತವವಾಗಿ ಮೂಡಿಬಂದಿದ್ದು. ಅದು ವೈರುಧ್ಯದ ಮೂಲಕ ವರ್ಗಭೇದವನ್ನು ಖಚಿತಗೊಳಿಸುತ್ತದೆ"[೧] ಎಂಬ ಮಾತುಗಳು ಕಾದಂಬರಿಗಳು ಪ್ರಧಾನ ಕಾಳಜಿಯನ್ನು ಧ್ವನಿಪೂರ್ಣವಾಗಿ ಹೇಳುತ್ತದೆ. ಕಾದಂಬರಿಯ ಇಬ್ಬರೂ ನಾಯಕರುಗಳು ಅಹಿಂಸಾಪರವಾದ ತಾತ್ವಿಕ ಚಿಂತನೆಗಳನ್ನು ಹೊಂದಿದವರಾಗಿದ್ದು. ಸಾಮಾಜಿಕ ಕಳಕಳಿಯನ್ನು ಹಂಬಲಿಸುತ್ತಾರೆ. ನಾಯಕ ಪಾತ್ರಗಳ ತಾತ್ವಿಕ ಕಾಳಜಿ ಸಮಾನತೆಯ ಧ್ಯೇಯ ಪ್ರಗತಿಪರ ಚಿಂತನೆಗಳು ಬಂಡವಾಳಶಾಹಿಗಳ ಬಗ್ಗೆ ಇರುವ ಆಕ್ರೋಶ. ಕಾರ್ಮಿಕರ ಪರವಾದ ಅನುಕಂಪಗಳೆಲ್ಲವೂ ಕಾದಂಬರಿಕಾರರ ಸ್ವಾನುಭವಗಳ ಧ್ಯೇಯೋದ್ದೇಶಗಳ ಪ್ರತಿರೂಪವಾಗಿದೆ. ಕಟ್ಟಿಮನಿಯವರು ವ್ಯವಸ್ಥೆಯೊಳಗೆ ವಿಜೃಂಭಿಸುತ್ತಿರುವ ಸಮಾಜಘಾತಕ ಶಕ್ತಿಗಳ ಕರಾಳ ಮುಖವನ್ನು ನಿರ್ಭಿಡೆಯಿಂದ ಚಿತ್ರಿಸಿದ್ದಾರೆ. ಗಿರಣಿಯಲ್ಲಿ ದುಡಿಯುತ್ತಿದ್ದ ಹೆಣ್ಣುಮಕ್ಕಳನ್ನು ಬಲವಂತವಾಗಿ ತಮ್ಮ ನೀಲಾಭವನಕ್ಕೆ ಎಳೆದೊಯ್ದು ಭೋಗಿಸುತ್ತಿದ್ದ ಶೆಟ್ಟರು ಹಾಗೂ ಅವನ ಮಗ ಸದಾಶಿವಪ್ಪರ ಕುಕೃತ್ಯಗಳನ್ನು ಕಾದಂಬರಿಯಲ್ಲಿ ದಾಖಲಾಗಿಸಿದ್ದಾರೆ.

'ಯಾರದೋ ದುಡ್ಡು ಎಲ್ಲಮ್ಮ ಜಾತ್ರೆ' ಮಾಡುತ್ತಿದ್ದ ಶಿವಯೋಗಿಯ ಸೋಮಾರಿ ಜೀವನ ಮತ್ತು ಕಪಟತನವನ್ನು ಬಯಲು ಮಾಡಿರುವುದು ಕಂಡು ಬರುತ್ತದೆ. ಅಧಿಕಾರದ ದಾಹದಿಂದ ಕಮ್ಯುನಿಸ್ಟ್, ಸಂಘಟನೆಯನ್ನು ಪತನಗೊಳಿಸಲು ಯತ್ನಿಸಿದ ಸೋಶಿಯಲಿಸ್ಟರು ನಿಜವಾದ ಕಾರ್ಮಿಕ ದ್ರೋಹಿಗಳೆಂಬ ಭಾವನೆ ಓದುಗರಲ್ಲಿ ಉಂಟಾಗುತ್ತದೆ. ಬಡವರ ಬವಣೆಗಳನ್ನು ಅರಿಯದ ಕಾರ್ಮಿಕರ ದಾರುಣ ಬದುಕನ್ನು ಗ್ರಹಿಸಿದ ಶಾರಾದಾಮಣಿಯು ತನ್ನ ಸ್ವಾರ್ಥದಿಂದ ಅವರನ್ನು ಒಕ್ಕಲೆಬ್ಬಿಸುವ ಘಟನೆಯು ಸಾಮಾಜಿಕ ಕ್ರೌರ್ಯಕ್ಕೆ ಹಿಡಿದ ಕನ್ನಡಿಯಂತಿದೆ. ತಮ್ಮ ಬಾಯಲ್ಲಿ ದಯೆಯನ್ನು ಪಠಿಸುವ ಸ್ವಾಮೀಜಿಗಳು ಸೋಮಣ್ಣನ ವಿಷಯದಲ್ಲಿ ತಾಳುವ ಅಮಾನವೀಯ ವರ್ತನೆಯು ಪ್ರಚಲಿತ ಶ್ರೀಮಂತರ ಪೋಷಕರಾಗಿರುವ ಸ್ವಾಮೀಜಿಗಳ ವರ್ತನೆಯನ್ನು ಅಣುಕಿಸುವಂತಿದೆ. ಕಾದಂಬರಿಯಲ್ಲಿ ಕಂಡು ಬರುವ ಬಂಡವಾಳಶಾಹಿಗಳು ಮತ್ತು ಶ್ರೀಮಂತರ ಹಿನ್ನೆಲೆಯು ಬಡತನದಿಂದ ಕೂಡಿದ್ದು ಅಕ್ರಮ ಗಳಿಕೆಯಿಂದಲೇ ಮೇಲೇರುತ್ತಾರೆಂಬುದನ್ನು ತುಂಗಭದ್ರಯ್ಯನ ಮಾತುಗಳು ಸ್ಪಷ್ಟಪಡಿಸುತ್ತವೆ. "ಪ್ರಾಮಾಣಿಕತನದಿಂದ ಈ ಪ್ರಪಂಚದಲ್ಲಿ ಯಾರೂ ಶ್ರೀಮಂತರಾಗಲು ಸಾಧ್ಯವಿಲ್ಲ. ನ್ಯಾಯ, ನೀತಿ, ಸತ್ಯ ಇತ್ಯಾದಿ ಆದರ್ಶಗಳನ್ನೆಲ್ಲಾ ಪೆಟ್ಟಿಗೆಯಲ್ಲಿ ಹಾಕಿ ಕಟ್ಟಿಟ್ಟು ಹಣ ಸಂಪಾದನೆಗೆ ಹೊರಡಬೇಕಾಗಿರುತ್ತದೆ"[೨] ಎಂಬ ತುಂಗಭದ್ರಯ್ಯನ ಮಾತುಗಳು ಪ್ರಸ್ತುತ ಸಮಾಜದ ಶ್ರೀಮಂತರ ಗಳಿಕೆಯನ್ನು ಬಿಂಬಿಸುತ್ತಲೇ ಶ್ರೀಮಂತಿಕೆಗಾಗಿ ಅವರು ಅನುಸರಿಸುವ ಮಾರ್ಗವನ್ನು ತಿಳಿಸುತ್ತದೆ.

ಕಟ್ಟಿಮನಿಯವರು ಬದುಕಿನುದ್ದಕ್ಕೂ ಬದುಕಿಗಾಗಿ ಹೋರಾಡಿದವರು. ವಿಷಮ ಸಾಮಾಜಿಕ ವ್ಯವಸ್ಥೆಯನ್ನು ನಿರ್ನಾಮ ಮಾಡಿ ಸರ್ವರಿಗೂ ಸಮಾನ ಅವಕಾಶ ಕಲ್ಪಿಸುವ ಸಾಮಾಜಿಕ ವ್ಯವಸ್ಥೆಯೊಂದನ್ನು ನಿರ್ಮಾಣ ಮಾಡುವ ಹಂಬಲ ಹೊಂದಿದ್ದರು. ಅದಕ್ಕಾಗಿ ಯಾವುದೇ ಪ್ರಬಲ ಪಟ್ಟಭದ್ರ ಹಿತಾಸಕ್ತಿಗಳೊಡನೆ ರಾಜಿ ಮಾಡಿಕೊಳ್ಳದೆ

ನಿರಂತರವಾಗಿ ಹೋರಾಡಿದರು. ಆದ್ದರಿಂದಲೇ ಕಾದಂಬರಿಯ ನಾಯಕ ಚಂದ್ರಣ್ಣನು ಬಡವರೊಡನೆ ಬದುಕಲು ಬಯಸುವುದು. ಮಲ್ಲವ್ವನಂಥ ವೃದ್ಧೆಗೆ ಸಹಾಯಹಸ್ತ ಚಾಚುವುದು, ಕಾರ್ಮಿಕರ ಹೋರಾಟವನ್ನು ಬೆಂಬಲಿಸಿ ಶ್ರೀಮಂತರ ವಿರೋಧಿಸುವುದು, ಬಡವಳಾಗಿದ್ದರೂ ವಿವಾಹವಾಗಿದ್ದರೂ ಗಂಡನಿಂದ ತಿರಸ್ಕೃತಳಾದ ರತ್ನಳನ್ನು ಸಂಗಾತಿಯಾಗಿ ಸ್ವೀಕರಿಸುವುದು. ಚಂದ್ರಣ್ಣನು ವ್ಯವಸ್ಥೆಯೊಡನೆ ರಾಜಿ ಮಾಡಿಕೊಳ್ಳುವುದಾಗಿದ್ದರೆ ಶ್ರೀಮಂತ ಸೆಟ್ಟರ ಮಗಳು ಸ್ಫುರದ್ರೂಪಿ ಶಾರದಾಮಣಿಯನ್ನು ವಿವಾಹವಾಗಿ ವೈಭವದಿಂದ ಜೀವನವನ್ನು ನಡೆಸಬಹುದಾಗಿತ್ತು. ಆದರೆ ಚಂದ್ರಣ್ಣನಿಗೆ ಅದು ಬೇಕಾಗಿರಲಿಲ್ಲ. ಏಕೆಂದರೆ ಶೋಷಣಾರಹಿತ, ವರ್ಗರಹಿತ ಸಮಾಜದ ಸ್ಥಾಪನೆ ಅವನ ಮಹತ್ವಾಕಾಂಕ್ಷೆಯಾಗಿತ್ತು. ಕಾದಂಬರಿಕಾರರ ಕನಸು ಚಂದ್ರಣ್ಣನ ತಂತ್ರದ ಮೂಲಕ ಬಿಂಬಿತವಾಗಿದೆ. "ಅನ್ಯಾಯ ಯಾರಿಂದಲೇ ಆಗಿರಲಿ ಹೇಗೆಯೇ ಆಗಿರಲಿ ಅದನ್ನು ಖಂಡಿಸುವುದು, ವಿಡಂಬಿಸುವುದು ಜೀವಂತ ಲೇಖಕನ ಕರ್ತವ್ಯ ಎಂದೇ ಕಟ್ಟಿಮನಿ ತಿಳಿದಿದ್ದರು."[೩] ಆದ್ದರಿಂದಲೇ ಜ್ವಾಲಾಮುಖಿಯ ಮೇಲೆ ಕಾದಂಬರಿಯ ವಾಸ್ತವತಾವಾದದ ನೆಲೆಗಟ್ಟಿನಲ್ಲಿಯೇ ನುಡಿ ಮಾಡಿದೆ. ಶಾರದಾಮಣಿಯ ಪಾತ್ರವನ್ನು ಹೊರತುಪಡಿಸಿ ಉಳಿದೆಲ್ಲಾ ಸ್ತ್ರೀ ಪಾತ್ರಗಳು ಜೀವಪರವಾಗಿದ್ದು ದುಡಿಮೆಯ ಮೂಲಕವೇ ಬದುಕನ್ನು ಕಂಡುಕೊಂಡರು. ಸರ್ವಸಮಾನ ಸಮಾಜದ ಸ್ಥಾಪನೆಗಾಗಿ ತಮ್ಮ ವೈಯುಕ್ತಿಕ ಹಿತಾಸಕ್ತಿಗಳನ್ನು ತ್ಯಜಿಸಿ ಸಾಮೂಹಿಕ ಬದುಕಿಗಾಗಿ ಹಗಲಿರುಳೂ ದುಡಿಯುತ್ತವೆ. ಒಟ್ಟಾರೆ "ಜ್ವಾಲಾಮುಖಿಯ ಮೇಲೆ ವಾಸ್ತವತೆ ಮತ್ತು ಕಲ್ಪನೆಗಳನ್ನು ಬೆರಸಿಕೊಂಡು ಬೆಳೆದಿರುವ ಕಲಾತ್ಮಕ ಕಾದಂಬರಿ. ರಾಜಕೀಯ ಸ್ಥಿತಿಗತಿ, ಬಂಡವಾಳ ಶಾಹಿಗಳ ಆಡಂಬರ ದೌರ್ಜನ್ಯ ಮತ್ತು ಕಾರ್ಮಿಕರ ಬದುಕು ಹೋರಾಟಗಳನ್ನು ಚಿತ್ರಿಸುವ, ಅದರ ಬಹುಭಾಗ ವಾಸ್ತವತೆ ಆಗಿದ್ದರೂ ಕಾರ್ಮಿಕರೊಂದಿಗೆ ಸಂಪರ್ಕವಿಟ್ಟುಕೊಳ್ಳುವ ಚಂದ್ರಣ್ಣ ರತ್ನಳಿಗೆ ಹತ್ತಿರದವನಾಗುವ ಹಾಗೂ ಅವಳೊಂದಿಗೆ ಒಂದಾಗು ಭಾಗ ಕಾಲ್ಪನಿಕವಾದದ್ದು"[೪] ಎಂಬ ಮಾತುಗಳು ಅರ್ಥಪೂರ್ಣವಾಗಿವೆ. ಕಾದಂಬರಿಯು ಆರಂಭದಿಂದ ಅಂತ್ಯದವರೆವಿಗೂ ಸಾಮಾಜಿಕ ಕಳಕಳಿಯನ್ನು ಹೊಂದಿದ್ದು ಅತ್ಯಮೂಲ್ಯ ಆಶಯದೊಡನೆ ಸುಖಾಂತ್ಯದಲ್ಲಿ ಪರ್ಯಾವಸಾನ ಹೊಂದುತ್ತದೆ.

ವ್ಯಾಸರಾಯ ಬಲ್ಲಾಳರ 'ಬಂಡಾಯ' ಕಾದಂಬರಿಯು ಲೇಖಕರ ಪ್ರಬುದ್ಧ ಪ್ರೌಢಿಮೆಯಿಂದ ರೂಪುಗೊಂಡಿದೆ. ವರ್ಗ ಪರಿಕಲ್ಪನೆಯನ್ನೇ ಪ್ರಧಾನ ಆಶಯವಾಗಿ ಹೊಂದಿರುವ ಕಾದಂಬರಿ ಕೌಟುಂಬಿಕ ಸೆಳೆತಕ್ಕೊಳಗಾದಂತೆ ಕಂಡು ಬರುತ್ತದೆ.

ಸ್ತ್ರೀ ಪಾತ್ರಗಳ ಬಗೆಗೆ ಅಪಾರ ಒಲುವಿರುವ ಕಾದಂಬರಿಕಾರರು ಅವುಗಳಿಗೆ ರಕ್ತ ಮಾಂಸ ತುಂಬಿ ಶಕ್ತಿಯುತವಾಗಿ ಚಿತ್ರಿಸಿದ್ದಾರೆ. ಇಡೀ ಕುಟುಂಬವನ್ನೇ ಸಂಬಾಳಿಸುವ ಲಕ್ಷ್ಮೀಯು ಎಲ್ಲಾ ಪರಿಸ್ಥಿತಿಗೂ ಎಲ್ಲರೊಡನೆಯೂ ಹೊಂದಿಕೊಳ್ಳುವ ಮೃದು ಧೋರಣೆಯ ವೈದಿಕ ಪರಂಪರೆಯ ಆದರ್ಶ ಸ್ತ್ರೀಯಾಗಿ ಚಿತ್ರಿತಳಾಗಿದ್ದಾಳೆ. ಶರ್ಮ ಕುಟುಂಬಕ್ಕೆ ಸೆಡ್ಡು ಹೊಡೆದು ನಿಲ್ಲುವ ನಯನಾ ನಿಜವಾದ ದಿಟ್ಟತನದ ಬಂಡಾಯಗಾರ್ತಿಯಾಗಿದ್ದು ಐಷಾರಾಮಿ ಬದುಕಿನ ಹಿಂದಿರುವ ಕ್ರೂರ ವ್ಯವಸ್ಥೆಯನ್ನು ತ್ಯಜಿಸಿ ಪಲಾಯನವಾಗುತ್ತಾಳೆ.

ಬಂಡವಾಳ ಶಾಹಿಗಳ ಕುಕೃತ್ಯಗಳನ್ನು ನಿರ್ದಾಕ್ಷಿಣ್ಯವಾಗಿ ಪ್ರತಿಭಟಿಸುವ ಅವಳು ತಾತ್ವಿಕ ವಿಚಾರದಲ್ಲಿ ಗೊಂದಲದ ಗೂಡಾಗಿದ್ದಂತೆ ಕಂಡು ಬರುತ್ತಾಳೆ. ಕಾದಂಬರಿಯ ನಾಯಕಿ ಯಾಮಿನಿಯು ಸಾಂಪ್ರದಾಯಿಕ ಕೌಟುಂಬಿಕ ವ್ಯವಸ್ಥೆಯನ್ನು ಭೇದಿಸಿ ಹೊರಬರುತ್ತಾಳೆ. ತನ್ನ ಗಂಡನ ಬಗ್ಗೆ ಅನುರಾಗ ತೋರುವ ಬದಲು ಅನುಕಂಪ ವ್ಯಕ್ತಪಡಿಸುತ್ತಾಳೆ. ಕೌಟುಂಬಿಕ ಹಿತಾಸಕ್ತಿಗಳನ್ನು ನಿರಾಕರಿಸಿ ಕಾರ್ಮಿಕರ ಹಿತಾಸಕ್ತಿಗಾಗಿ ದುಡಿಯುವ ಯಾಮಿನಿಯು ರಾಜೀವನ ನೆರವಿನೊಂದಿಗೆ ಕಾರ್ಮಿಕ ವಲಯದಲ್ಲಿ ಅಧಿಕೃತ ನಾಯಕಿಯಾಗಿ ಹೊರಹೊಮ್ಮುತ್ತಾಳೆ. ಅನಿವಾರ್ಯವೆನಿಸಿದಾಗ ಕಾರ್ಮಿಕರ ಹಿತಾಸಕ್ತಿಗಾಗಿ ಹಿಂಸೆಯನ್ನು ಪ್ರತಿಪಾದನೆ ಮಾಡುವ ಅವಳು ಕಾದಂಬರಿಕಾರರ ಅಂತರಾಳದ ಆಶಯವನ್ನು ಈಡೇರಿಸುವಂತೆ ತುಂಬು ಬರುತ್ತಾಳೆ.

ಕಾದಂಬರಿಯು ಹಿಂಸೆಯ ಪ್ರಚೋದನೆಯಿಂದಲೇ ಯಶಸ್ಸನ್ನು ಕಾಣುತ್ತದೆ. ದೇಶಪಾಂಡೆಯು ಭ್ರಷ್ಟವ್ಯವಸ್ಥೆಯನ್ನು ನಿರ್ನಾಮಗೊಳಿಸಲು ಅಮಾಯಕರನ್ನು ಬಲಿತೆಗೆದುಕೊಳ್ಳುವುದು ವಿಪರ್ಯಾಸವೆನಿಸುತ್ತದೆ. ರಾಜೀವನಿಗೆ ಪ್ರತಿಸ್ಪರ್ಧಿಯಾಗಿ ಸಮಾನಾಂತರ ಕಾಯ್ದುಕೊಳ್ಳುವ ನಾಯಕನಾಗಿ ಹೊರಹೊಮ್ಮುವ ದೇಶಪಾಂಡೆ ಹಿಂಸೆಯನ್ನು ತನ್ನ ಪ್ರಮುಖ ಅಸ್ತ್ರವಾಗಿಸಿಕೊಂಡು ಮೇಲೇರುತ್ತಾನೆ. ಯಾಮಿನಿಯು ಇವನ ಧೋರಣೆ ಹೋರಾಟದ ವಿಧಾನವನ್ನು ವಿರೋಧಿಸಿದರೂ ಕೂಡ ಹಿಂಸೆಯನ್ನು ಪ್ರತಿಪಾದಿಸುತ್ತಾಳೆ. ಹಿಂಸೆಯನ್ನು ಬೆಂಬಲಿಸಿ ತತ್ಕಾಲಿಕ ಪರಿಹಾರದಲ್ಲಿ ತೃಪ್ತಿ ಪಡಲೆತ್ನಿಸುವ ಕಾರ್ಮಿಕರಿಗೆ ರಾಜೀವನ ನಾಯಕತ್ವ ಅನಗತ್ಯವೆನಿಸುತ್ತದೆ. ತನ್ನ ಅಸ್ತಿತ್ವವು ಶಿಥಿಲಗೊಳ್ಳುತ್ತಿರುವುದನ್ನು ಗ್ರಹಿಸಿದ ರಾಜೀವ ಹಿಂಸೆಯನ್ನು ಒಪ್ಪಿಕೊಂಡು ಮುಂಬೈನಿಂದ ನಿರ್ಗಮಿಸುತ್ತಾನೆ. ಯಾಮಿನಿಯ ನಾಯಕತ್ವವು ಪ್ರಬಲವಾಗಿ ಕಂಡರೂ ರಾಜೀವನ ಪಲಾಯನ ಓದುಗರನ್ನು ಚಿಂತನೆಗೊಳಗು ಮಾಡುತ್ತದೆ. ಇಲಿ ಬಂಡಾಯವೆನ್ನುವುದು ಕೇವಲ ಮಾಲೀಕರ ವಿರುದ್ಧವಲ್ಲ. ಯಜಮಾನ್ಯ ಕೌಟುಂಬಿಕ ವ್ಯವಸ್ಥೆಯ ವಿರುದ್ಧ ಭ್ರಷ್ಟ ಅಧಿಕಾರಿಗಳ ವಿರುದ್ಧ ಮಾನವ ಮಾನವರ ನಡುವೆ ಮಹಾಕಂದಕಗಳನ್ನು ನಿರ್ಮಿಸಿರುವ ವ್ಯವಸ್ಥೆಯ ವಿರುದ್ಧ ನಡೆಯುತ್ತದೆ. ವ್ಯವಸ್ಥೆಯನ್ನು ಬುಡಮೇಲು ಮಾಡುವ ಮಹದುದ್ದೇಶದಿಂದ ಹಿಂಸೆಯನ್ನು ಒಪ್ಪಿಕೊಂಡಿರುವಂತಿದೆ.

"ಬಂಡಾಯ" ಕಾದಂಬರಿಯಲ್ಲಿ ಬರುವ ಕಮ್ಯುನಿಸ್ಟ್ ಪ್ರಣಾಳಿಕೆ, ನಕ್ಸಲೈಟ್ ವಿಧಾನ ಮುಂತಾದ ರಾಜಕೀಯ ಅಂಶಗಳನ್ನು ಪೂರ್ವಭಾವಿಯಾಗಿ ಅರಿತಿದ್ದರೆ ಒಳ್ಳೆಯದು. ಇದನ್ನು ಅರೆಬೆಂದ ರೀತಿಯಲ್ಲಿ ತಿಳಿದರೆ ಕಾದಂಬರಿಯು ಅರ್ಥವಾಗುವುದರ ಬದಲು ಅಪಾರ್ಥವಾಗುವ ಸಂಭವವೂ ಇದೆ"[9] ಎಂಬ ಮಾತುಗಳು ಕೆಲವು ಸನ್ನಿವೇಶಗಳಲ್ಲಿ ಔಚಿತ್ಯವೆನಿಸುತ್ತದೆ. ಕಾದಂಬರಿಯ ವೇಗವು ಅತ್ಯಂತ ನಿಧಾನವಾಗಿದ್ದರೂ ಪ್ರತಿಯೊಂದು ಸನ್ನಿವೇಶವೂ ಓದುಗರಲ್ಲಿ ಕುತೂಹಲವನ್ನು ಕಾಯ್ದುಕೊಳ್ಳುತ್ತದೆ. ಹಿಂಸೆಯಿಂದ ಮಾತ್ರ ಬದಲಾವಣೆ ಸಾಧ್ಯವೆಂಬ ಧೋರಣೆಯು ಭಾರತೀಯ ಸಂದರ್ಭದಲ್ಲಿ ಸತ್ವಯುತವೆನಿಸುವುದಿಲ್ಲ. "ಇಲ್ಲಿ ಸಂಘರ್ಷ-ವರ್ಗ ಸಂಘರ್ಷ ಮಾತ್ರವಾಗಿರದೆ ಮಾನವ ಅವಸ್ಥಾಂತರಗಳ ನಿಗೂಢ ಪ್ರಜ್ಞೆಯಾಗಿದೆ. ಮಾನವ ಮನಸ್ಸುಗಳ ಒಳಮುಖ ವ್ಯಾಪಕ

ಶೋಧನೆಯಾಗಿದೆ"[೭] ಎಂಬ ಪತ್ರಗಳು ಬಂಡಾಯ ಕಾದಂಬರಿಯ ದೃಷ್ಟಿಯಿಂದ ಅರ್ಥಪೂರ್ಣವೆನಿಸುತ್ತದೆ. ಒಟ್ಟಾರೆಯಾಗಿ "ಸಮಾನತೆ, ಶುಚೀಜೀವನ ಬಂಡಾಯ ಹಣವಂತನ ಖಾಸಗಿ ಸಮಸ್ಯೆ ಬಗೆಗೂ ಕರುಣೆ, ಪಾತಿವ್ರತ್ಯ, ಬ್ರಹ್ಮಚರ್ಯೆ ಇವುಗಳ ಬಲ್ಲಾಳರ ಜೀವನ ದೃಷ್ಟಿ. ಎಲ್ಲ ನೋವಿನ ನಡುವೆಯೂ ಪುಟಿದ ಜೀವನೋತ್ಸಾಹ ಅವರ ಕಾದಂಬರಿಯ ವೈಶಿಷ್ಟ್ಯತೆ ಸ್ತ್ರೀಯರಿಗೆ ಧೈರ್ಯ ತುಂಬುವ ಶೀಲದ ಬಗ್ಗೆ ಎಚ್ಚರಿಕೆ ಕೊಡುವುದು ಅವರ ಉದ್ದೇಶ " ಎಂಬ ವಿಮರ್ಶೆಯ ಮಾತುಗಳು ಇಡೀ ಕಾದಂಬರಿಗೆ ಅನ್ವಯಿಸುವಂತಿದೆ. ವರ್ಗರಹಿತ ಸಮಾಜದ ಸ್ಥಾಪನೆಯು ಲೇಖಕರ ಪ್ರಮುಖ ಕಾಳಜಿಯಾಗಿದೆ.

ಕಟ್ಟಿಮನಿಯವರ ಹೆಸರನ್ನು ಕನ್ನಡ ಸಾಹಿತ್ಯ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ಸ್ಥಿರಗೊಳಿಸಿದ ಕೆಲವೇ ಕೃತಿಗಳಲ್ಲಿ 'ಜ್ವಾಲಾಮುಖಿಯ ಮೇಲೆ' ಕಾದಂಬರಿ ಮೊದಲ ಸ್ಥಾನದಲ್ಲಿ ನಿಲ್ಲುತ್ತದೆ. ಸಾಮಾಜಿಕ ವ್ಯವಸ್ಥೆಯೊಳಗಿನ ವಿವಿಧ ಮುಖಗಳನ್ನು ಓದುಗರಿಗೆ ದರ್ಶನ ಮಾಡಿಸುತ್ತಾರೆ. "ವರ್ಗ ಸಮರದ ಕತೆಯನ್ನು ಜ್ವಾಲಾಮುಖಿಯ ಮೇಲೆ ಕನ್ನಡದಲ್ಲಿ ಮೊಟ್ಟಮೊದಲ ಮನದಟ್ಟಾಗುವಂತೆ ನೀಡಿದ ಶ್ರೇಯಸ್ಸು ಕಟ್ಟಿಮನಿಯವರದು"[೮] ಎಂಬ ಮಾತುಗಳು ಔಚಿತ್ಯಪೂರ್ಣವಾಗಿದೆ. ನಲವತ್ತರ ದಶಕದಲ್ಲಿಯೇ ಬಂಡಾಯ ಸಾಹಿತ್ಯವನ್ನು ರಚಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ. ಸಾಮಾಜಿಕ ಅಕರಾಳ ವಿಕರಾಳ ಮುಖಗಳನ್ನು ನಿರ್ಭಿಡೆಯಿಂದ ಅನಾವರಣ ಮಾಡಿದ್ದಾರೆ. ಬಲ್ಲಾಳರು ಹೆಚ್ಚು ಬದುಕಿದ್ದು ಮುಂಬೈನಲ್ಲಾದರೂ ಬರೆದಿದ್ದು ಮಾತ್ರ ಕನ್ನಡ. ಕೌಟುಂಬಿಕ ಬದುಕನ್ನೇ ತಮ್ಮ ಕೃತಿಗಳಿಗೆ ಮೂಲ ದ್ರವ್ಯವನ್ನಾಗಿಸಿಕೊಳ್ಳುವ ಅವರು ಮಾಲೀಕ ಮತ್ತು ಕಾರ್ಮಿಕರ ಸಂಘರ್ಷವನ್ನು ಸಮಸ್ಯೆಗಳನ್ನು ಕುರಿತು ಅಧಿಕೃತವಾಗಿ ಅರ್ಥವತ್ತಾಗಿ ಚಿತ್ರಿಸಿದ್ದಾರೆ. ಬಂಡಾಯವು "ವರ್ಗ ಸಂಘರ್ಷ ಮತ್ತು ಹಿಂಸೆಯ ವಿವಿಧ ಮುಖಗಳನ್ನು ತೆರೆದು ತೋರಿಸುವ ದೃಷ್ಠಿಯುಳ್ಳ ಕನ್ನಡದ ಏಕೈಕ ಕಾದಂಬರಿಯೂ ಇದಾಗಿದೆ."[೯] ಸಾಮಾಜಿಕ ಕ್ರೌರ್ಯಕ್ಕೆ ಒಳಗಾಗಿದ್ದ ಮಹಿಳೆಯು ಸಾಮಾಜಿಕ ನ್ಯಾಯಕ್ಕಾಗಿ ತನ್ನ ಹಕ್ಕು ಬಾಧ್ಯತೆಗಳಿಗಾಗಿ ಹೋರಾಡಲು ಸಮಾಜದ ಮುಖ್ಯವಾಹಿನಿಗೆ ಪ್ರವೇಶಿಸುವುದು ಎರಡೂ ಕಾದಂಬರಿಗಳಲ್ಲಿ ವಿಶೇಷವಾಗಿದೆ. ಪ್ರಚಲಿತ ಸ್ತ್ರೀವಾದಿಗಳಿಗೆ ಸ್ಪೂರ್ತಿ ನೀಡುವಂತಹ ಸ್ತ್ರೀಪಾತ್ರಗಳನ್ನು ಸೃಷ್ಟಿಸಿರುವ ಕಟ್ಟಿಮನಿ ಮತ್ತು ಬಲ್ಲಾಳರಿಬ್ಬರೂ ಶೋಷಣಾರಹಿತ ಸಮಾನತೆಯ ಸಮಾಜ ಸ್ಥಾಪನೆಯನ್ನು ತಮ್ಮ ಪ್ರಧಾನ ಕಾಳಜಿಯನ್ನಾಗಿಸಿಕೊಂಡಿದ್ದಾರೆ. ಸಾಗುವ ದಾರಿ ಭಿನ್ನವಾದರೂ ವಸ್ತು ಒಂದೇ ಆಗಿರುವಂತೆ ಕಾದಂಬರಿಗಳ ಆಶಯವೂ ಒಂದೇ ಆಗಿದೆ.

## ವರ್ಗ, ವರ್ಣ-ಜಾತಿ, ಲಿಂಗಸಂಬಂಧೀ ನೆಲೆಯಲ್ಲಿಜ್ವಾಲಾಮುಖಿ ಮತ್ತು ಬಂಡಾಯ ಕಾದಂಬರಿಗಳು

ಒಂದು ಕಾಲಘಟ್ಟದಲ್ಲಿ ಅಭಿವ್ಯಕ್ತವಾದ ಸಾಹಿತ್ಯ ಪ್ರಕಾರವೊಂದು ಆ ಕಾಲದಲ್ಲಿನ ಬರಹಗಾರರನ್ನು ಆಧರಿಸಿಯೇ ತನ್ನ ಸ್ವರೂಪವನ್ನು ನಿರ್ಧರಿಸಿಕೊಳ್ಳುತ್ತಿರುತ್ತದೆ. ಹೀಗೆ ನಿರ್ಧರಿಸಿಕೊಳ್ಳುವಲ್ಲಿ ಬರಹಗಾರರ ದೃಷ್ಠಿಕೋನಗಳು ಪ್ರಮುಖ ಮಾನದಂಡವಾಗಿ ಮಹತ್ವ ಪಡೆಯುತ್ತವೆ. ಅಧ್ಯಯನದ ಕಕ್ಷೆಯಲ್ಲಿರುವ ಕತೆಗಳು

ಆ ಕಾಲದ ಪ್ರಚಲಿತ ಸಂಗತಿಗಳನ್ನು ಕತೆಯಾಗಿಸುವಲ್ಲಿ ಪ್ರಯತ್ನಪಟ್ಟಿರುವುದನ್ನು ಗಮನಿಸಲಾಗಿದೆ. ಕಾದಂಬರಿಗಳ ಅಧ್ಯಯನದ ಜೊತೆಗೆ ನಿರ್ದಿಷ್ಟ ಸಾಮಾಜಿಕ ಆಶಯಗಳ ನೆಲೆಯಲ್ಲಿ ಕಾದಂಬರಿಗಳು ಕಾಣಿಸುವ ಬಗೆಯನ್ನು ವಿವರಗಳು ನೋಡಬೇಕಿದೆ.

ಸಮಾಜವೊಂದರ ಜ್ವಲಂತ ಸಮಸ್ಯೆಗಳು ಸಾಮಾಜಿಕ ಆಶಯಗಳಾಗಿ ರೂಪು ಪಡೆಯುತ್ತವೆ. ವರ್ಗ ವರ್ಣ ಲಿಂಗಭೇದ ಅಸಮಾನತೆಗಳನ್ನು ಇಂಥ ಸಾಮಾಜಿಕ ಆಶಯಗಳನ್ನಾಗಿ ಗುರ್ತಿಸಬಹುದು. ಇವು ಭಾರತದ ಜನಜೀವನವನ್ನು ಒಂದಲ್ಲ ಒಂದು ರೀತಿಯ ಅಸ್ತವ್ಯಸ್ತತೆಗೆ ಗುರಿ ಮಾಡಿವೆ. ಇಂಥ ಅಸಮಾನತೆಗಳನ್ನು ತೊಡೆದು ಹಾಕುವ ಕಾಯಕಲ್ಪ ಬರಹಗಾರನದ್ದಾಗಿದ್ದಾಗ ಸಾಮಾಜಿಕ ಆಶಯದ ಧ್ವನಿ ಹೆಚ್ಚು ಗಟ್ಟಿಯಾಗಿ ಕೇಳಿಸುತ್ತದೆ. ಇಂಥ ಕಡೆ ಬರಹಗಾರನು ವ್ಯವಸ್ಥೆಯ ಪರ ಅಥವಾ ವಿರೋಧದ ಕಡೆ ಮುಖ ಮಾಡಿರುತ್ತಾನೆ. ವ್ಯವಸ್ಥೆಯೊಂದು ಆಯಾ ಕಾಲದಲ್ಲಿ ತನ್ನ ಜನ ವಿರೋಧಿ ಹಾಗೂ ಪ್ರತಿಗಾಮಿ ಧೋರಣೆಗಳಿಂದ ಯಾವತ್ತೂ ಬರಹಗಾರನಿಂದ ವಿರೋಧಕ್ಕೆ ಒಳಗಾಗುತ್ತಿರುತ್ತದೆ. ಪ್ರಗತಿಶೀಲ ಸಾಹಿತ್ಯ ಚಳುವಳಿಯ ಸಂದರ್ಭದಲ್ಲಿ ಬಂದ ಬರಹವು ಸ್ಪಷ್ಟವಾಗಿ ವ್ಯವಸ್ಥೆಯ ವಿರೋಧವನ್ನು ಕಟ್ಟಿಕೊಂಡವು. ಇಂಥ ವಿರೋಧವು ಆರೋಗ್ಯಕರವಾದ ಮತ್ತು ಪ್ರಗತಿಪರ ಸಮಾಜ ಸ್ಥಾಪನೆಯ ಉದ್ದೇಶಕ್ಕಾಗಿ ಬಂದಂತಹುದಾಗಿತ್ತು.

ಸಮಾಜದ ಜೊತೆ ಸ್ಪಷ್ಟವಾದ ನಿರ್ದಿಷ್ಟವಾದ ಸಂಬಂಧವನ್ನು ಘೋಷಿಸಿಕೊಂಡ ಮೊದಲ ಸಾಹಿತ್ಯಿಕ ಚಳುವಳಿಯಾಗಿ ಪ್ರಗತಿಶೀಲವು ಕಂಡು ಬರುವಲ್ಲಿ ಇಂಥ ಅಂಶಗಳನ್ನು ಗುರುತಿಸಬಹುದಾಗಿದೆ. ಇದರಿಂದಾಗಿ ಸಾಮಾಜಿಕ ಅಸಮಾನತೆಗಳ ವಿರುದ್ಧ ದನಿ ಎತ್ತುವ ಸಮಾನತೆಯ ಸಮಾಜ ಸ್ಥಾಪಿಸಲು ಇರುವ ಅಡ್ಡಿ ಆತಂಕಗಳತ್ತ ಬೆಳೆದು ಚೆಲ್ಲುವ ಕೆಲಸ ಪ್ರಗತಿಶೀಲ ಬರಹಗಾರರಿಗೆ ಸ್ವಾಭಾವಿಕವಾಗಿಯೇ ಅನಿವಾರ್ಯವೆನಿಸಿತ್ತು.

ಪ್ರಗತಿಶೀಲ ಸಾಹಿತ್ಯವು ಮಧ್ಯಮ ವರ್ಗ ದುರ್ಬಲ ದಲಿತರನ್ನು ಕುರಿತ ಚಿಂತನೆ ಮಾಡುತ್ತಾ ಅವರ ಸಮಸ್ಯೆಗಳನ್ನು ಸಾಹಿತ್ಯದ ವಸ್ತುವಾಗಿ ಎತ್ತಿಕೊಂಡಿತು ಈ ಸಾಹಿತ್ಯ ಕ್ರಾಂತಿಯಿಂದಲೇ ಶಾಂತಿ ಸಾಧ್ಯವೆಂದು ಸಾರುತ್ತಾ ಸಮಾಜದ ಬದಲಾವಣೆಗೆ ಪ್ರಯತ್ನಿಸಿತು. ಬಡವರು ದಲಿತರು ಸ್ತ್ರೀಯರು ಅಸಹಾಯಕರಿಗೆ ಪರನಿಲ್ಲುತ್ತಾ ಬಂಡವಾಳಶಾಯಿಯನ್ನು ಈ ಸಾಹಿತ್ಯವು ವಿರೋಧಿಸಿತ್ತು. ಸಾಹಿತ್ಯ ಜನ ಪರವಾಗಬೇಕು ಅಂದರೆ ಶೋಷಣೆಗೆ ಒಳಗಾದ ದುರ್ಬಲವರ್ಗಗಳ ಪರವಾಗಬೇಕು ಹರಿಜನರು ಬಡವರು ಸ್ತ್ರೀಯರು ರೈತರು ಕೂಲಿಗಾರರು ಈ ಎಲ್ಲಾ ವರ್ಗಗಳ ಹಿತಾಸಕ್ತಿ ಸಾಹಿತ್ಯದಲ್ಲಿ ಮುಖ್ಯವಾಗಬೇಕು ಎಂಬ ಆಶಯ ಪ್ರಗತಿಶೀಲರದಾಗಿತ್ತು.

"ಪ್ರಗತಿಶೀಲ ಸಾಹಿತ್ಯ ಆಧುನಿಕ ಸಾಹಿತ್ಯದಲ್ಲಿ ಆವರೆಗೆ ಕಾಣದಿದ್ದ ಹೊಸ ಕೇಂದ್ರ ಭಾವವೊಂದನ್ನು ತಂದು ಕೊಟ್ಟಿತು ಸುತ್ತಲಿನ ಸಮಾಜದ ಕೊಳೆಯನ್ನು ತೊಡೆದು ಹಾಕುವ ಛಲದಿಂದ ಬರೆದ ಪ್ರಗತಿಶೀಲರು ಗೌರವಸ್ಥರು ಬಚ್ಚಿಡುವ ವಿಷಯಗಳನ್ನು ಆರಿಸಿ ಬರೆದರು. ಆಷಾಢಭೂತಿತನವನ್ನು ಬಯಲಿಗೆಳೆಯಲು ಬರೆದರು.

ಲೈಂಗಿಕ ಜೀವನದಲ್ಲಿ ಮೋಸ ಹೆಚ್ಚಾಗಿ ನಡೆಯುವುದರಿಂದ ಇದು ಅನೇಕ ಕೃತಿಗಳ ವಸ್ತುವಾಯಿತು"[10] ಪ್ರಗತಿ ಶೀಲರು ತಮ್ಮ ಕಾದಂಬರಿಗಳಲ್ಲಿ ಮಾಲೀಕರು ಮತ್ತು ಕಾರ್ಮಿಕರ ನಡುವಿನ ಹೋರಾಟದ ಜೊತೆ ಜೊತೆಯಲ್ಲೇ ಸಾಮಾಜಿಕ ವ್ಯವಸ್ಥೆಯೊಳಗಿನ ಸಂಕೀರ್ಣದೃಶ್ಯಗಳು ಬಡವರು, ಶ್ರೀಮಂತರು, ಮೇಲಿನ ಮತ್ತು ಕೆಳವರ್ಗಗಳ ಶೋಷಣೆಯ ಚಿತ್ರಗಳನ್ನು ತಮ್ಮ ಕಾದಂಬರಿಯಲ್ಲಿ ಒಡಮೂಡಿಸಿರುವದನ್ನು ಕಾಣಬಹುದು.

'ಜ್ವಾಲಾಮುಖಿಯ ಮೇಲೆ' ಒಂದು ರಾಜಕೀಯ ಕಾದಂಬರಿಯೂ ಹೌದು ಸಾಮಾಜಿಕ ಕಾದಂಬರಿಯೂ ಹೌದು ಕುಟುಂಬವೂ ಸಾಮಾಜಿಕ ವ್ಯವಸ್ಥೆಯ ಅವಿಭಾಜ್ಯ ಅಂಗವಾಗಿರುವುದರಿಂದ ಸಾಮಾಜಿಕ ಕ್ರೌರ್ಯವು ಕುಟುಂಬದ ಮೇಲೆ ಪ್ರಭಾವ ಬೀರುತ್ತದೆ. ಇಲ್ಲಿ ಲಿಂಗ ಸಂಬಂಧೀ ನಲೆಯಲ್ಲಿ ಶೋಷಣೆಗೆ ಒಳಗಾದ ಹಲವು ಪಾತ್ರಗಳ ಚಿತ್ರಣ ಇಲ್ಲ ಗಮನಿಸಬಹುದು. ಹಿಂಸೆ ಸ್ವಾರ್ಥ ದುಃಖ ಕ್ಲಿಷ್ಟ ಸಮಸ್ಯೆಗಳು ಅವಿವೇಕ ಅನಾಚಾರಗಳು ಕುಟುಂಬದಲ್ಲಿ ಘಟಿಸಿ ಮನುಷ್ಯನಿಗೆ ದೈಹಿಕ ಹಾಗೂ ಮಾನಸಿಕ ಹಿಂಸೆಯನ್ನುಂಟು ಮಾಡುತ್ತವೆ. ಈ ಕಾದಂಬರಿಯಲ್ಲಿ ಸಾಮಾಜಿಕ ಕ್ರೌರ್ಯವು ಕುಟುಂಬದ ಮೇಲೆ ಪ್ರಭಾವ ಬೀರುತ್ತದೆ. ಇಲ್ಲಿ ಲಿಂಗ ಸಂಬಂಧಿ ನೆಲೆಯಲ್ಲಿ ಶೋಷಣೆಗೆ ಒಳಗಾದ ಹಲವು ಪಾತ್ರಗಳ ಚಿತ್ರಣ ಇಲ್ಲಿ ಗಮನಿಸಬಹುದು ಹಿಂಸೆ, ಸ್ವಾರ್ಥ, ದುಃಖ, ಕ್ಲಿಷ್ಟ ಸಮಸ್ಯೆಗಳು ಅವಿವೇಕ ಅನಾಚಾರಗಳು ಕುಟುಂಬದಲ್ಲಿ ಘಟಿಸಿ ಮನುಷ್ಯನಿಗೆ ದೈಹಿಕ ಹಾಗೂ ಮಾನಸಿಕ ಹಿಂಸೆಯನ್ನುಂಟು ಮಾಡುತ್ತವೆ. ಈ ಕಾದಂಬರಿಯಲ್ಲಿ ಮಹಿಳೆಯರಿಗೆ ಕೌಟುಂಬಿಕ ವಲಯದಲ್ಲಾಗಿರುವ ಹಿಂಸೆಯನ್ನು ಕಾದಂಬರಿಕಾರರು ಅರ್ಥಗರ್ಭಿತವಾಗಿ ಚಿತ್ರಿಸಿದ್ದಾರೆ. ಮೃಗೀಯ ವರ್ತನೆಯ ಗಂಡಂದರಿ ಕಪಿಮುಷ್ಟಿಗೆ ಸಿಲುಕಿ ದೈಹಿಕ ಹಾಗೂ ಮಾನಸಿಕ ಹಿಂಸೆಯನ್ನು ಅನುಭವಿಸಿ ಕೊನೆಗೆ ಅವರಿಂದಲೇ ಹೊರಹಾಕಲ್ಪಟ್ಟ ರತ್ನ ಮತ್ತು ನಾಗಮ್ಮರ ಪಾತ್ರಗಳು ಪ್ರಸ್ತುತ ವಿವೇಚನೆಗೆ ಉಲ್ಲೇಖಾರ್ಹವಾಗಿದೆ. ಕುಟುಂಬದಿಂದ ತಿರಸ್ಕಾರಕ್ಕೆ ಒಳಗಾದ ಈ ಇಬ್ಬರೂ ಮಹಿಳೆಯರು ಸ್ವಾವಲಂಬಿ ಬದುಕನ್ನು ರೂಪಿಸಿಕೊಂಡು ಸಾಮಾಜಿಕ ನ್ಯಾಯಕ್ಕಾಗಿ ಹಾಗೂ ಕಾರ್ಮಿಕರ ಹಕ್ಕು ಬಾದ್ಯತೆಗಳಿಗಾಗಿ ಹಗಲಿರುಳೂ ಶ್ರಮಿಸುತ್ತಾರೆ.

ನಾಗಮ್ಮ ಹರಿಜನರವಳಾಗಿದ್ದು ಕುಡುಕ ಗಂಡನಿಂದ ದೈಹಿಕ ಹಾಗೂ ಮಾನಸಿಕ ಕಿರುಕುಳವನ್ನು ಅನುಭವಿಸುತ್ತಿರುತ್ತಾಳೆ. ಹಿಂಸೆಯು ತಾರಕಕ್ಕೇರಿದಾಗ ಅದನ್ನು ಪ್ರತಿಭಟಿಸಿ ನಿಂತಾಗ ಸಿಟ್ಟಿಗೆದ್ದ ಗಂಡನು ಅವಳನ್ನು ಮನೆಯಿಂದ ಹೊರಹಾಕುವನು. ಎದೆಗುಂದದ ನಾಗಮ್ಮ ಗಿರಣಿಯಲ್ಲಿ ನೌಕರರಿಗೆ ಸೇರಿ ಸ್ವಾವಲಂಬಿ ಬದುಕನ್ನು ರೂಪಿಸಿಕೊಳ್ಳುತ್ತಾಳೆ ಕಾರ್ಮಿಕರ ಹಕ್ಕು ಬಾಧ್ಯತೆಗಳಿಗಾಗಿ ಸ್ಥಾಪಿತವಾಗಿರುವ ಕಾರ್ಮಿಕ ಸಂಘದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ದುಡಿಯುತ್ತಾಳೆ.

ಕಾದಂಬರಿಯ ಪ್ರಧಾನ ಪಾತ್ರದಾರಿ ರತ್ನಮ್ಮ ಕೂಡ ಗಂಡನಿಂದ ಶೋಷಣೆಗೆ ಒಳಗಾಗಿ ಮನೆಯಿಂದ ಹೊರದಬ್ಬಲ್ಪಟ್ಟು ತವರು ಮನೆ ಸೇರುತ್ತಾಳೆ. ಗಂಡ, ಅತ್ತೆ, ಮಾವ ಎಲ್ಲರೂ ಸೇರಿ ರತ್ನಮ್ಮಳಿಗೆ ಕಿರುಕುಳ ನೀಡಲಾರಂಭಿಸುತ್ತಾರೆ. ರತ್ನಮ್ಮಳಿಗೆ ಸಮಾಗಮದ ಮೊದಲ ರಾತ್ರಿಯೇ ಗಂಡನ ಮೃಗೀಯ ಸ್ವಭಾವದ

ಪರಿಚಯವಾಗುತ್ತದೆ. ಅವನ ವರ್ತನೆಗಳು ರತ್ನಮ್ಮಳಿಗೆ ದಿಗ್ಭ್ರಮೆಯನ್ನುಂಟು ಮಾಡುತ್ತದೆ. ಯಾವುದೇ ಭಾವನೆಗಳನ್ನು ಹಂಚಿಕೊಳ್ಳದ ಮಮತೆಯನ್ನು ತೋರದ ಅವನು ಹಸಿದ ನಾಯಿ ಎಲುಬಿನ ತುಂಡನ್ನು ನೆಕ್ಕುವಂತೆ ಅವಳ ತರುಣ ದೇಹವನ್ನು ನೆಕ್ಕಿದನು. ಅವನಿಂದಲೇ ರತ್ನಳಿಗೆ ಅವನಲ್ಲಿ ಅನಾದರ, ಜಿಗುಪ್ಸೆ, ಹೇಸಿಗೆ, ತಿರಸ್ಕಾರ ಉಂಟಾಗಿ ಅವನ ಕೈ ಸ್ಪರ್ಶವಾದರೂ ಸಹ ಅವಳ ಮೈಯೆಲ್ಲಾ ನಡುಗುತ್ತಿತ್ತು. ಸೂಳೆಯರ ಸಹವಾಸ ವ್ಯಭಿಚಾರ, ಇಸ್ಪೀಟು, ಸಾರಾಯಿ ಕುಡಿತ ಅವನಿಗೆ ಚಟಗಳಾಗಿ ಪರಿಣಮಿಸಿದ್ದವು. ಕಾಲಾಂತರದಲ್ಲಿ ರತ್ನಮ್ಮಳ ಮೈ ಮೇಲಿದ್ದ ಒಡವೆಗಳನ್ನೆಲ್ಲಾ ಒಂದೊಂದಾಗಿ ದೋಚಿಕೊಂಡು ತನ್ನ ಚಟಗಳಿಗೆ ಮಾರಿದನು ಮಗನ ದುರ್ನಡತೆಯಿಂದ ಕೋಪಗೊಂಡ ತಂದೆತಾಯಿಂದಿರು ಅವನ ಮೇಲಿನ ಸಿಟ್ಟನ್ನು ಸೊಸೆ ರತ್ನಳ ಮೇಲೆ ತೀರಿಸಿಕೊಳ್ಳಲು ಮುಂದಾಗುತ್ತಿದ್ದರು. ಇವರನ್ನು ಸರಿದಾರಿಗೆ ತರಲು ಪ್ರಯತ್ನಿಸಿದ ರತ್ನ ವಿಫಲಳಾಗಿ ಗಂಡನ ಮನೆಯವರಿಂದಲೇ ಹೊರಹಾಕಲ್ಪಟ್ಟು ತವರು ಸೇರುತ್ತಾಳೆ. ಧೃತಿಗೆಡೆದ ಅವಳು ಗಿರಿಣಿಯಲ್ಲಿ ಕೆಲಸಕ್ಕೆ ಸೇರಿ ಅಸಹಾಯಕ ಅಣ್ಣ ಹಾಗೂ ವೃದ್ಧೆ ತಾಯಿಗೆ ಆಸರೆಯಾಗುತ್ತಾಳೆ. ಕಮ್ಯೂನಿಸ್ಟ್ ಸಂಘಟನೆಯ ಚಟುವಳಿಗಳಲ್ಲಿ ತೊಡಗಿಸಿಕೊಂಡು ಕಾರ್ಮಿಕರ ಕಲ್ಯಾಣಕ್ಕಾಗಿ ನಡೆಯುವ ಹೋರಾಟಗಳ ನೇತೃತ್ವವನ್ನು ವಹಿಸುತ್ತಾಳೆ ಹೀಗೆ ಲೇಖಕರು ಭಾರತೀಯ ಕುಟುಂಬದ ಎರಡು ವೈರುದ್ಯಗಳನ್ನು ಚಿತ್ರಿಸುವುದರ ಮುಖಾಂತರ ಕೌಟುಂಬಿಕ ಹಿಂಸೆಯ ಆಂತರಾಳವಿತರಾಳ ಮುಖಗಳನ್ನು ಪರಿಚಿಸುತ್ತಾರೆ ಅದೇ ಸಂದರ್ಭದಲ್ಲಿ ವ್ಯವಸ್ಥೆಯನ್ನು ಮೆಟ್ಟಿನಿಂತು ವೈಯುಕ್ತಿಕ ನೋವುಗಳನ್ನು ಬದಿಗಿರಿಸಿ ಕಾರ್ಮಿಕರ ಹಕ್ಕು ಭಾದ್ಯತೆಗಳಿಗಾಗಿ ನಿರಂತರವಾಗಿ ಶ್ರಮಿಸುವ ಮಹಿಳೆಯರ ಸಾಧನೆಯನ್ನು ಚಿತ್ರಿಸುತ್ತಾರೆ.

'ಬಂಡಾಯ' ಕಾದಂಬರಿಯ ಶೀರ್ಷಿಕೆ ವ್ಯವಸ್ಥೆಯೊಂದನ್ನು ಪಲ್ಲಟಗೊಳಿಸುವುದಕ್ಕಾಗಿ ಮಾಡುವ ಪ್ರತಿಭಟನೆಯನ್ನು ಪ್ರತಿನಿಧಿಸುತ್ತದೆ. ಬಂಡಾಯ ಎಂಬುದು ಕೇವಲ ಕಾರ್ಮಿಕ ವಲಕ್ಕಷ್ಟೇ ಸೀಮಿತವಾಗಿರುತ್ತದೆ ಕೌಟುಂಬಿಕ ವಲಯದಲ್ಲೂ ಕಂಡು ಬರುತ್ತದೆ. ಕೌಟುಂಬಿಕ ವ್ಯವಸ್ಥೆಯ ವಿಕಾರಗಳು ಹಿಂಸೆಯನ್ನು ಹುಟ್ಟು ಹಾಕುತ್ತವೆ. ಕುಟುಂಬವು ಒಂದು ಸಾಮಾಜಿಕ ಘಟಕವಾಗಿದ್ದು ಅಲ್ಲಿ ಮಾನವ ಸಹಜ ಕೃತ್ರಿಮತೆಗಳು ಘಟಿಸುತ್ತವೆ. ಸಂಘರ್ಷಗಳು ಕ್ಷೋಭೆಗಳು ಉಂಟಾಗುತ್ತವೆ. ಬಂಡಾಯ ಕಾದಂಬರಿಯಲ್ಲಿ ಸ್ತ್ರೀಯರ ಮೇಲಿನ ಶೋಷಣೆಯನ್ನು ವಿಶ್ಲೇಷಿಸುವಾಗ ಪ್ರಧಾನವಾಗಿ ಯಾಮಿನಿಯ ಕುಟುಂಬ ಹಾಗೂ ಶರ್ಮಾ ಕುಟುಂಬವನ್ನು ಪರಿಗಣಿಸಬೇಕಾಗುತ್ತದೆ. ಯಾಮಿನಿಯ ದಾಂಪತ್ಯ ಜೀವನಕ್ಕೆ ಪ್ರವೇಶ ಎಡೆಮುತ್ತಿದ್ದಂತೆಯೇ ದುರಂತ ಪೂರ್ಣ ಸಂಭವಿಸಿಬಿಟ್ಟಿತು. ಅವಳ ಗಂಡ ಶ್ರೀಕಾಂತರಾಜೆಯು ಪೋಲಿಯೋ ರೋಗಕ್ಕೆ ತುತ್ತಾಗಿ ಅಸಹಾಯಕವಾಗಿ ಅನುತ್ಪಾದಕ ವ್ಯಕ್ತಿಯಾಗಿ ಮನೆ ಸೇರಿದರೂ ಹೆಂಡತಿಯನ್ನು ಸಂಶಯ ದೃಷ್ಟಿಯಿಂದ ನೋಡುತ್ತಾ ಅವಾಚ್ಯಶಬ್ದಗಳಿಂದ ಬೈಯತೊಡಗಿದನು. ದುಡಿಯಲೇಬೇಕಾದ ಅನಿವಾರ್ಯತೆಗೆ ಸಿಲುಕಿದ ಯಾಮಿನಿಯು ದುಡಿಯುತ್ತಿದ್ದರೂ ಬೈಗುಳಗಳು ಮಾನಸಿಕ ಹಿಂಸೆಯನ್ನು ನೀಡುತ್ತಿದ್ದವು ಕುಟುಂಬದಲ್ಲಿ ಕಳೆದುಕೊಂಡ ನೆಮ್ಮದಿಯನ್ನು ಕುಟುಂಬದ ಹೊರಗೆ ಪಡೆದುಕೊಳ್ಳುವ ಅಗತ್ಯತೆಯನ್ನು ಯಾಮಿನಿ ಕಂಡುಕೊಂಡಳು.

ಶರ್ಮಾ ಕುಟುಂಬವು ಶ್ರೀಮಂತ ವರ್ಗಕ್ಕೆ ಸೇರಿದ್ದರೂ ಮಾನಸಿಕ ತಾಕಲಾಟಗಳು ತಾತ್ವಿಕ ಭಿನ್ನಾಭಿಪ್ರಾಯಗಳು ಇಡೀ ಕುಟುಂಬವನ್ನು ಬೆಂಬಿಡದೆ ಕಾಡುತ್ತವೆ. ಸಮಾಜದಲ್ಲಿ ಮೇಲಿನ ವರ್ಗದವರು ಕೆಳವರ್ಗವನ್ನು ಅಸಹಾಯಕ ಜನರನ್ನು ಶೋಷಿಸುವ ವಿವಿಧ ಮುಖಗಳನ್ನು 'ಜ್ವಾಲಾಮುಖಿಯ ಮೇಲೆ' ಕಾದಂಬರಿಯಲ್ಲಿ ಕಟ್ಟಿಮನಿಯವರು ಸರಳವಾಗಿ ಚಿತ್ರಿಸಿದ್ದಾರೆ. ಸೆಟ್ಟರ ಮಗಳು ಶಾರದಾಮಣಿಯು ತನ್ನ ಓದಿಗೆ ಅಡೆತಡೆಯಾಗುವಂತೆ ಗದ್ದಲ ಮಾಡುತ್ತಾರೆ ಎಂಬ ಒಂದೇ ಕಾರಣಕ್ಕಾಗಿ ತಮ್ಮ ಕಾಂಪೌಂಡ್ ಪಕ್ಕದ ನಗರದ ಸಭೆ ಸ್ಥಳದಲ್ಲಿ ಸಹಜವಾಗಿ ಬದುಕುತ್ತಿದ್ದ ಗಿರಣಿಯ ಕೂಲಿಕಾರರು ರೈತರು ಮತ್ತು ಬಡವರನ್ನು ಒಕ್ಕಲೆಬ್ಬಿಸುವ ಘಟನೆಯು ಪ್ರತಿಯೊಬ್ಬ ಓದುಗನಿಗೂ ಮನಕಲಕುವಂತೆ ಮಾಡುತ್ತದೆ. ಬಂಡವಾಳಶಾಹಿಗಳ ಅಮಾನವೀಯ ಕ್ರೌರ್ಯಕ್ಕೆ ಅನ್ಯಾಯದ ಕುಕೃತ್ಯಕ್ಕೆ ಈ ಘಟನೆ ಸಾಕ್ಷಿಯಾಗಿದೆ. ಬಡವರ ಕೂಲಿಕಾರರ ಬೆವರಿನಲ್ಲಿ ಬದುಕುತ್ತಿರುವ ಬಂಡವಾಳಶಾಹಿಗಳು ಹಾಗೂ ಅಧಿಕಾರ ಶಾಹಿಗಳು ಅವರನ್ನು ತಮ್ಮ ನೆರೆಯಲ್ಲಿ ಬದುಕಲು ಬಿಡದೆ ಅಮಾನುಷವಾಗಿ ನಡೆಸಿಕೊಳ್ಳುತ್ತಿರುವುದು ಪ್ರಚಲಿತ ವಿಕೃತಿಗೆ ಸಾಕ್ಷಿಯಾಗಿದೆ.

ರಸ್ತೆಬದಿಯಲ್ಲಿ ಸಾಗುತ್ತಿದ್ದ ವೃದ್ಧೆಗೆ ಕಾರಿನಲ್ಲಿ ಹೋಗುತ್ತಿದ್ದ ಸದಾಶಿವಪ್ಪನು ಡಿಕ್ಕಿ ಹೊಡೆದರೂ ಆತ ಸೌಜನ್ಯಕ್ಕಾದರೂ ಹಿಂತಿರುಗಿ ನೋಡದಿರುವುರು ಮತ್ತು ಇಂಥವರನ್ನೂ ಬೆಂಬಲಿಸುವ ಪೋಲಿಸ್ ವ್ಯವಸ್ಥೆ, ಬಡವರ ಮಾರಣಹೋಮಕ್ಕೂ ಹೇಸದ ವ್ಯವಸ್ಥೆಯೊಂದು ಹಣದ ಅಧಿಕಾರದ ಮದದಿಂದ ಮೆರೆಯುತ್ತಿರುವುದಕ್ಕೆ ನಿದರ್ಶನವಾಗಿದೆ. ನಾಗಮ್ಮನ ಮೇಲೆ ಪುಂಡದಿಂದ ನಡೆಯುವ ಬಲತ್ಕಾರ ಮುಖಂಡದಿಂದ ನಡೆಯುವ ಅತ್ಯಾಚಾರ ರತ್ನಾಳ ಮೇಲೆ ಅಧಿಕಾರಿಗಳಿಂದಾಗುವ ಕಿರುಕುಳ ಸದಾಶಿವಪ್ಪನ ಭಂಟರಿಂದಾಗುವ ಅಪಹರಣ ಸದಾಶಿವಪ್ಪನ ಬಲಾತ್ಕಾರ ಮುಂತಾದ ಪ್ರಸಂಗಳು ಬಡವರು ಶ್ರೀಮಂತರಿಗೆ ಕೇವಲ ಭೋಗದ ವಸ್ತುಗಳಂತೆ ಗೋಚರಿಸುತ್ತಿರುವುದನ್ನು ನಾವು ಕಾಣುತ್ತೇವೆ ಚಂದ್ರಣ್ಣನಿಗೆ ಕಂಪನಿಯವರು ಕಾಂಗ್ರೆಸ್ಸಿಗರು ಶಿವಯೋಗಿ ನೀಡುವ ಮಾನಸಿಕ ಹಿಂಸೆ, ಗಿರಣಿ ಕೆಲಸ ಮಾಡುತ್ತಿದ್ದಾಗ ಕೈಕೆಳೆದುಕೊಂಡ ಸೋಮಣ್ಣನಿಗೆ ನೀಡಬೇಕಾದ ಪರಿಹಾರದ ವಿಷಯದಲ್ಲಿ ವಿಧಿಸುವ ಶೆಟ್ಟರ ಷರತ್ತುಗಳು ಸ್ವಾಮಿಜಿಗಳ ಉದ್ದಟತನದ ವರ್ತನೆಗಳೆಲ್ಲವೂ ವಿಷಮ ಸಾಮಾಜಿಕ ವ್ಯವಸ್ಥೆಯ ಕೊಡುಗೆಗಳೆಂದೇ ಹೇಳಬೇಕು ಕೇವಲ ಹೊಟ್ಟೆಪಾಡಿಗಾಗಿ ತನ್ನ ಚೆಲುವೊಡಲನ್ನು ಮಾರಿಕೊಂಡು ವ್ಯಭಿಚಾರ ನಡೆಸಬೇಕಾದ ಅನಿವಾರ್ಯತೆಯನ್ನು ಸಾವಿತ್ರಿಗೆ ಸೃಷ್ಟಿಸಿದ್ದು ಸಹ ಈ ಸಮಾಜ ಎಂಬುದನ್ನು ತಿಳಿಯಬೇಕಾಗುತ್ತದೆ. ಹಗಲಿರುಳು ಬೆವರುಸುರಿಸಿ ದುಡಿದರೂ ಹಸಿದ ಹೊಟ್ಟೆಗೆ ಅನ್ನವಿಲ್ಲದೆ ನರಳುತ್ತಿರುವ ಬಡವರ ಶೋಚನೀಯ ಬದುಕು ಒಂದೆಡೆಯಾದರೆ ಹಣದ ಅಮಲಿನಲ್ಲಿ ಶ್ರೀಮಂತಿಕೆಯ ಮದದಲ್ಲಿ ಅಧಿಕಾರದ ವ್ಯಾಮೋಹದಲ್ಲಿ ಬೀಗುತ್ತಿರುವ ಶ್ರೀಮಂತರ ವೈಭವದ ಬದುಕು ಮತ್ತೊಂದೆಡೆ ಮುಖಾಮುಖಿಯಾಗುತ್ತವೆ. ಶ್ರೀಮಂತರು ಬಡವರನ್ನು ಕೇವಲ ತಮ್ಮ ಹಿತದ ಸಾಧನಗಳು ಭೋಗದ ವಸ್ತುಗಳು ದುಡಿಯುವ ಗಾಣದ ಎತ್ತುಗಳು ಎಂದು ಗ್ರಹಿಸಿರುವುದು ವಿಚಿತ್ರವಾದರೂ ಸತ್ಯಸಂಗತಿ ಮನುಷ್ಯನು ಬದುಕುತ್ತಿರುವುದು ಸಮಾಜದಲ್ಲಿ ಸಮಾಜದಲ್ಲಿರುವ ವ್ಯಕ್ತಿಗಳು ಹಿಂಸೆ, ಅಹಿಂಸೆ, ಅನ್ಯಾಯ, ಸ್ವಾರ್ಥ, ನಿಸ್ವಾರ್ಥ, ನಂಬಿಕೆ, ಅಪನಂಬಿಕೆ,

ಮೋಸ, ವಂಚನೆ ಭ್ರಷ್ಟಾಚಾರಗಳ ಸವಿಯನ್ನು ಅನುಭವಿಸುತ್ತಾರೆ. ಅತ್ಯಾಚಾರ, ಕಿರುಕುಳ, ದರೋಡೆ, ಕೊಲೆ ಸುಲಿಗೆಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಸಂಭವಿಸುವ ವಿಕೃತಿಗಳಾಗಿವೆ ಬಂಡಾಯ ಕಾದಂಬರಿಯಲ್ಲಿಯೂ ಇವು ಘಟಿಸಿವೆ. ಹಾರ್ನಿಮನ್ ವೃತ್ತದ ತೋಟದಲ್ಲಿ ಕುಳಿತಿದ್ದ ಕುಷ್ಠರೋಗಿಯನ್ನು ಕಂಡ ರಾಜೀವನು ಅವನು ಸಾಯಬೇಕೆಂದು ಚಿಂತಿಸಿದರೆ ಅಲ್ಲಿಗೆ ಬಂದ ಪೋಲೀಸನೊಬ್ಬ ಕುಷ್ಠರೋಗಿಯನ್ನು ಬೆದರಿಸಿ ತಾನು ಸುಖವಾಗಿ ನಿದ್ರಿಸುತ್ತಾನೆ. ಅಸಹಾಯಕ ವ್ಯಕ್ತಿಗಳನ್ನು ಕಂಡು ಅಸಹ್ಯಪಡುವ ಅವರ ಮೇಲೆಯೇ ದಬ್ಬಾಳಿಕೆಯನ್ನು ಮಾಡುವ ವ್ಯವಸ್ಥೆಯೊಂದು ಅನಾವರಣವಾಗಿದೆ. ಯಾಮಿನಿಗೆ ಕಂಪನಿಯ ಅಧಿಕಾರಿ ನೀಡುವ ಲೈಂಗಿಕ ಕಿರುಕುಳ, ಕಮಾಟಿ ಹೆಣ್ಣಿನ ಬಲತ್ಕಾರ, ಪ್ರೀತಿ ಇಂಡಸ್ಟ್ರೀಸ್‌ನಲ್ಲಿ ಕೆಲಸ ಮಾಡುತ್ತಿದ್ದ ವಾಸಂತಿಯ ಮೇಲೆ ಮಾಡುವ ಹಠಸಂಭೋಗ ಮುಂತಾದ ಘಟನೆಗಳು ಪ್ರಚಲಿತ ಸಮಾಜದಲ್ಲಿ ಮಹಿಳೆಯ ಮೇಲೆ ನಡೆಯುತ್ತಿರುವ ಆಕ್ರಮಣ ಶೋಷಣೆಗಳನ್ನು ಎತ್ತಿ ತೋರುತ್ತವೆ. ಮಹಿಳೆಯನ್ನು ಕೇವಲ ಭೋಗವಸ್ತುವಾಗಿ ಬಳಸಿಕೊಳ್ಳುತ್ತಿರುವ ಕಾಮತೃಷೆಯ ಪೂರೈಕೆಗಾಗಿ ಎಂಬಂತೆ ಪರಿಗಣಿಸುತ್ತಿರುವ ಯಜಮಾನ ಸಂಸ್ಕೃತಿಯ ಆಕರಾಳ ವಿಕರಾಳಗಳನ್ನು ಈ ಕಾದಂಬರಿಯಲ್ಲಿ ಕಾಣಬಹುದು.

ಭಾಂದ್ರಾದಲ್ಲಿ ಕಸಾಯಿಖಾನೆಯನ್ನು ನಿರ್ಮಾಣ ಮಾಡುವ ನೆಪದಲ್ಲಿ ಬಳಿಯಲ್ಲೇ ಇದ್ದ ಜೋಪಡಿಗಳೆಲ್ಲವನ್ನು ನೆಲಸಮ ಮಾಡಿದ ಪ್ರಭುತ್ವವಾದಿಗಳಿಗೆ ಜೋಪಡಿಯಲ್ಲಿ ಬದುಕುತ್ತಿರುವವರ ನೋವು ಸಂಕಟಗಳು ಅರ್ಥವಾಗುವುದಿಲ್ಲ ಸಾಮಾಜಿಕ ವ್ಯವಸ್ಥೆಯಲ್ಲಿ ಅಮಾನವೀಯತೆಯ ಅಸ್ಪೃಶ್ಯ ಬದುಕನ್ನು ನಡೆಸುತ್ತಿರುವ ತೆಲಂಗಾಣದ ಜೀತದಾಳುಗಳು ವಾರಂಗಲ್ಲಿನ ಹಳ್ಳಿಗಳಲ್ಲಿ ಬದುಕುತ್ತಿರುವ ಚಮ್ಮಾರರು ಪೂರ್ವ ಉತ್ತರ ಪ್ರದೇಶದ ಜಿಲ್ಲೆಗಳಲ್ಲಿ ಬಿಹಾರದ ಗಡಿಯಲ್ಲಿ ಸೆಗಣಿಯಲ್ಲಿಬಿದ್ದ ಕಾಳುಗಳನ್ನು ತೊಳೆದು ತಿನ್ನುವ ಬಡಪಾಯಿಗಳು ಆದಿವಾಸಿಗಳು, ಬಡತನ ಮುಂತಾದ ದುಸ್ಥಿತಿಗೆ ಕಾರಣವಾದ ವ್ಯವಸ್ಥೆಯೊಂದು ಸಮಾಜದಲ್ಲಿ ಪ್ರಬಲವಾಗಿ ಪ್ರತಿಷ್ಠಾಪಿತವಾಗಿರುವುದು ಹಿಂಸೆಯ ಪರಾಕಾಷ್ಠೆಯನ್ನು ತೋರಿಸುತ್ತದೆ. ಮುಷ್ಕರ ನಿರತ ಕಾರ್ಮಿಕರನ್ನು ಪೋಲೀಸರ ಬೆಂಬಲದಿಂದ ಹತ್ತಿಕ್ಕುವುದು ಮುಷ್ಕರ ನಿರತ ಕಾರ್ಮಿಕರನ್ನು ವಜಾಮಾಡುವ ತೀರ್ಮಾನ, ಕಾರ್ಮಿಕ ನಾಯಕರನ್ನು ಹಣಕೊಟ್ಟು ಕೊಂಡುಕೊಳ್ಳಲು ಮಾಡುವ ಚಿಂತನೆ. ಇವುಗಳೆಲ್ಲ ಕಾರ್ಮಿಕರ ಆತ್ಮವಿಶ್ವಾಸವನ್ನು ಕುಂದುವಂತೆ ಮಾಡಿ ಮುಷ್ಕರದ ದಿಕ್ಕನ್ನೇ ತಪ್ಪಿಸುವ ಪ್ರಯತ್ನ ಬಂಡವಾಳ ಶಾಹಿಗಳದು. ಇಂಥ ಹಿಂಸೆಯನ್ನು ನೀಡುವುದರ ಮೂಲಕ ವ್ಯವಸ್ಥೆಯನ್ನು ಬುಡಮೇಲು ಮಾಡುವುದನ್ನು ತಡೆಗಟ್ಟಿ ಬಂಡವಾಳಶಾಹಿಗಳನ್ನು ಪೋಷಿಸುವ ವ್ಯವಸ್ಥೆಯನ್ನೇ ಮುಂದುವರಿಸಲು ಪ್ರಯತ್ನಿಸುವುದು ಕಂಡು ಬರುತ್ತದೆ.

'ಕ್ರಾಂತಿ' ಪತ್ರಿಕೆಯ ಮೂಲಕ ಚಂದ್ರಣ್ಣನು ಕಾರ್ಮಿಕರು ಬಡವರು ಶೋಷಿತರರನ್ನು ಜಾಗೃತಿಗೊಳಿಸುತ್ತಾನೆ. ಇದಕ್ಕೆ ಬೆಂಬಲವಾಗಿ ನಿಂತ ಮುದ್ರಕ ರಂಗಯ್ಯ ಚಂದ್ರಣ್ಣನ ಸ್ನೇಹಿತರಾದ ಗುಬ್ಬಣ ಮತ್ತು ರಾಜಣ್ಣರ ಧೋರಣೆಗಳು ಅಹಿಂಸಾತ್ಮಕ ಹೋರಾಟವನ್ನು ಬೆಂಬಲಿಸುತ್ತವೆ. ಬಡವರಿಗೂ ಬಲ್ಲಿದರಿಗೂ ಪತ್ರಿಕೆಯನ್ನು

ಹಂಚುವ ಕೊಟ್ರಪ್ಪನ ಧ್ಯೇಯವೂ ಶೋಷಿತರ ಜಾಗೃತಿಯೇ ಆಗಿದೆ" ಬಡತನದ ಬೇಗೆಯಿಂದ ಬೆಂದು ಕೆಟ್ಟು ಪಟ್ಟಣ ಸೇರಿ ಗಿರಣಿಯಲ್ಲಿ ದುಡಿಯುತ್ತ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಜೈಲು ಸೇರಿ ರೋಗರುಜಿನಗಳಿಗೆ ಪಕ್ಕಾದ ತಂದೆ ಮತ್ತು ಮಡದಿಯನ್ನು ಕಳೆದುಕೊಂಡು ಗಂಡಬಿಟ್ಟ ತಂಗಿಯನ್ನು ಮುದುಕಿ ತಾಯಿಯನ್ನು ಕೂಡಿಕೊಂಡು ಕಷ್ಟದ ಜೀವನ ನಡೆಸುವ ಸೋಮಣ್ಣ.... ದುಡಿಮೆಗಾರರ ಹೋರಾಟದಲ್ಲಿ ಭಾಗಿಯಾಗುವ ಸಲುವಾಗಿ ತನ್ನವರನ್ನೆಲ್ಲ ತೊರೆದು ಹೊರಸಿಡಿದು ಬಂದ ಸರೋಜ, ಹೊಟ್ಟೆ ಬಟ್ಟೆಗಳಿಗಾಗಿ ತನ್ನ ಚೆಲುವೊಡಲನ್ನು ಮಾರಿಕೊಂಡು ವ್ಯಭಿಚಾರ ನಡೆಸುತ್ತಿದ್ದರೂ ಬಂದ ಹಣವನ್ನೆಲ್ಲ ಚಳುವಳಿಗಾಗಿ ಚೆಲ್ಲುತ್ತಿದ್ದ ಸಾವಿತ್ರಿ, ಗಂಡ ದಬ್ಬಾಳಿಕೆಯಿಂದ ಮುಕ್ತಳಾಗಿ ಚಳುವಳಿಯೇ ಸುಖವೆಂದು ಬಗೆದು ಸಂತೋಷದಿಂದ ಕೋಟಲೆಗಳನ್ನಪ್ಪಿಕೊಂಡ ಹರಿಜನರ ನಾಗಮ್ಮ, ಕಮ್ಯುನಿಷ್ಟ್ ಪಾರ್ಟಿಗಾಗಿ ಜೀವನವನ್ನೇ ಮೀಸಲಾಗಿರಿದ ಶಂಕರ್, ಪೋಲಿಸ ದಬ್ಬಾಳಿಕೆಗೆ ಹೆದರದೆ ಬಂಡವಾಳಗಾರರ ಕುಟಿಲ ನೀತಿಗೆದುರಾಗಿ ಸೆಟೆದು ನಿಂತು ಶ್ರಮಜೀವಿಗಳ ಕಲ್ಯಾಣಕ್ಕಾಗಿ ಪ್ರಾಣವನ್ನೇ ಬಲಿದಾನ ಮಾಡಲು ಸಿದ್ಧವಾದ ಮಲ್ಲೇಶಿ, ದುರುಗಪ್ಪ, ಇಬ್ರಾಹಿಂ"[೧೧] ವೈಯುಕ್ತಿಕ ಬದುಕಿನಲ್ಲಿ ನೋವುಗಳನ್ನು ಸವಿಯುತ್ತಿದ್ದರೂ ಕೂಲಿಕಾರರ ಮೇಲೆ ನಡೆಯುತ್ತಿರುವ ದೌರ್ಜನ್ಯಗಳನ್ನು ಖಂಡಿಸಿ, ಅವರ ಹಕ್ಕು ಬಾಧ್ಯತೆಗಳಿಗಾಗಿ ನ್ಯಾಯಯುತವಾಗಿ ಹೋರಾಡಲು ಕಾರ್ಮಿಕರ ಸಂಘಟನೆಯಲ್ಲಿ ತೊಡಗಿಕೊಂಡು ಚಳುವಳಿಯ ನೇತೃತ್ವವಹಿಸಿ ಬೀದಿಗಿಳಿದ ರತ್ನ, ಮುಂತಾದವರೆಲ್ಲ ಚಂದ್ರಣ್ಣನ ಆಶಯಗಳಿಗೆ ಬದ್ಧರಾಗಿ ಅಹಿಂಸಾತ್ಮಕ ಹೋರಾಟ ನಡೆಸುವರು.

ಕಮ್ಯುನಿಸ್ಟ್ ಸಂಘಟನೆಯ ಅಹಿಂಸಾತ್ಮಕ ಹೋರಾಟವನ್ನು ಬೆಂಬಲಿಸುತ್ತದೆ. ಕಮ್ಯುನಿಸ್ಟ್‌ನ ಮೂಲ ಆಶಯ ಅಹಿಂಸಾತ್ಮಕ ಹೋರಾಟವೇ ಆಗಿದೇ ಎಂಬುದು. ಶಂಕರ್‌ನ ಮಾತುಗಳಿಂದ ವೇದ್ಯವಾಗುತ್ತದೆ. ಚಂದ್ರಣ್ಣನು ಸ್ಟಾಲಿನ್‌ನನ್ನು ಉದಾಹರಿಸಿ ಕಮ್ಯೂನಿಸ್ಟರ ದೋರಣೆಯು ಹಿಂಸಾತ್ಮಕವಾದುದು ಎಂದು ಹೇಳಿದಾಗ ಅದನ್ನು ಅಲ್ಲಗಳೆದ ಶಂಕರನು "ನಮಗೆ ಶಾಂತಿಬೇಕು ಚಂದ್ರಣ್ಣ ಅಗತ್ಯವಾಗಿಯೂ ಶಾಂತಿಬೇಕು. ಆದರೆ ನಾವು ಅಪೇಕ್ಷಿಸುವುದು ಸ್ಮಶಾನಶಾಂತಿಯನ್ನೇಲ್ಲ ಬಡುವರ ಹೊಟ್ಟೆಗೆ ಕಲ್ಲುಹಾಕಿ ಅವರ ಪಾಲಿನ ಅನ್ನವನ್ನು ತಾವೇ ತಿಂದು ನಲಿಯುವ ಸ್ವಾರ್ಥಿಗಳ ಶಾಂತಿಯೂ ಒಂದು ಶಾಂತಿಯೇ ? ಎಲ್ಲಾ ಅಶಾಂತಿಗೂ ಒಂದು ಮೂಲಕಾರಣವಿದೆ. ಈ ಸುಲಿಗೆ ಈ ಶೋಷಣೆ, ಹಿಂಸೆ ಬಡಾದಾಟ ಹೋಡೆದಾಟ ಯಾರಿಗೆ ಬೇಕಾಗಿದೆ ಚಂದ್ರಣ್ಣ? ಜಗತ್ತಿನಲ್ಲಿ ಈಗಾಗಲೇ ಆಗಿರುವ ಹಿಂಸೆ ಸಾಲದೆ ? ಈಗಾಗಲೇ ಆಗಿರುವ ರಕ್ತಪಾತ ಸಾಲದೆ ಮಾನವನು ಮಾನವನ ಮೇಲೆ ನಡೆಸುತ್ತಿರುವ ದಬ್ಬಾಳಿಕೆಯನ್ನು ನಿಲ್ಲಿಸಿ ಎಲ್ಲರೂ ಶಾಂತಿಯಿಂದ ಸಮಾಧಾನದಿಂದ ಸುಖದಿಂದ ಬದುಕು ನಡೆಸುವಂತೆ ಮಾಡುವುದೇ ನಮ್ಮ ಗುರಿ"[೧೨] ಎಂದು ಹೇಳುವ ಶಂಕರನ ಮಾತುಗಳಿಂದ ಕಮ್ಯುನಿಷ್ಟರ ಹೋರಾಟದ ಅಹಿಂಸಾತ್ಮಕ ಸ್ವರೂಪ ಎಂಥದೆಂಬುದು ಗೋಚರಿಸುತ್ತದೆ. ಕಾದಂಬರಿಯಲ್ಲಿ ಶಂಕರನ ಮೂಲಕ ಹೇಳುವ ಮಾತುಗಳು ಕಟ್ಟಿಮನಿಯವರ ಮನದಾಳು ಮಾತುಗಳೇ ಆಗಿವೆ. ಚಂದ್ರಣ್ಣನ ಸಮಾಜಿಕ ಕಳಕಳಿ ಸಾಮಾಜಿಕ ಹೋರಾಟ ಅಧಿಕಾರ ಮತ್ತು ಶ್ರೀಮಂತಿಕೆಯೊಡನೆ ರಾಜಿ ಮಾಡಿಕೊಳ್ಳದ ಮನೋಭಾವ ಕಟ್ಟೀಮನೆಯವರ ತೀರಾ ವೈಯುಕ್ತಿಕ ಅನುಭವಗಳು ಆಗಿವೆ ಎಂದರೆ ತಪ್ಪಾಗಲಾರದು ಅವರ ಜೀವನ ಚರಿತ್ರೆಯನ್ನು

ಓದಿದ ಯಾರೂ ಇದನ್ನು ನಿರಾಕರಿಸಲಾರರು ಗಂಡನ ವಿರುದ್ಧ ಪ್ರತಿಭಟಿಸಿ ಹೊರನಡೆಯುವ ನಾಗಮ್ಮ ಗಂಡನ ಶ್ವಾನ ಸ್ವಭಾವಕ್ಕೆ ಹೇಸಿ ಸಮರ ಸಾರುವ ರತ್ನಮ್ಮ ಇವರಿಬ್ಬರೂ ಹೋರಾಟವೂ ಅಹಿಂಸಾತ್ಮಕವಾಗಿಯೇ ಇದೆ. ರತ್ನಮ್ಮಳ ಸೌಮ್ಯವಾದದ ನಂಬಿಕೆ. ಮಹಿಳೆಯ ಸ್ಥಾನಮಾನವನ್ನು ಕುರಿತು ಅಧಿಕೃತ ವಾಗಿ ಅಭಿವ್ಯಕ್ತಿಸುವ ಸಾಮರ್ಥ್ಯ. ಮಹಿಳೆಯರ ಶೋಷಣೆಯನ್ನು ಪೋಷಣೆ ಮಾಡುತ್ತಲೇ ಬಂದಿರುವ ಭಾರತೀಯ ಸಂಸ್ಕೃತಿ ಮತ್ತು ಪುರುಷ ಪ್ರಭುತ್ವವನ್ನು ಖಂಡಿಸುವ ಅವಳ ನಿಲುವುಗಳ ಸಮಾನತೆಯ ಸಮಾಜವೊಂದರ ನಿರ್ಮಾಣಕ್ಕೆ ಹಾತೊರೆಯುತ್ತಿರುವ ಪ್ರತಿಯೊಬ್ಬ ಸ್ತ್ರೀಯ ಧೋರಣೆಗಳೇ ಆಗಿವೆ. ಇಂದಿನ ಸ್ತ್ರೀವಾದಿಗಳಿಗಿಂತಲೂ ಎಷ್ಟೋ ಪಾಲು ದೊಡ್ಡವಳಾಗಿ ಮಹಿಳಿಯನ್ನು ಕುರಿತು ಮಾತನಾಡುವ ರತ್ನಮ್ಮ ಅಧಿಕೃತವಾಗಿ ಅಹಿಂಸಾತ್ಮಕ ಹೋರಾಟವನ್ನು ಪ್ರತಿಪಾದಿಸುತ್ತಾಳೆ. ಕಾದಂಬರಿಯ ಒಟ್ಟಾರೆ ತಿರುಳು ಧ್ಯೇಯೋದ್ದೇಶ ಅಹಿಂಸಾತ್ಮಕ ಪ್ರತಿಪಾದನೆಯೇ ಆಗಿದೆ ಎಂಬುದು ಗಮನಾರ್ಹ.

ಬಂಡಾಯ ಕಾದಂಬರಿಯ ಮೂಲ ಆಶಯ ಅಹಿಂಸಾತ್ಮಕ ಹೋರಾಟವನ್ನು ಬೆಂಬಲಿಸಿದರೂ ಹಿಂಸಾತ್ಮಕತೆಯ ರಭಸದಲ್ಲಿ ಅದು ಗೌಣವಾಗುತ್ತದೆ. ಕಾದಂಬರಿಯಲ್ಲಿ ನಡೆಸುವ ಆರಂಭಿಕ ಮುಷ್ಕರಗಳೆಲ್ಲವೂ ಅಹಿಂಸೆಯ ಮೂಲಕವೇ ಪರಿಹಾರ ಕಂಡು ಕೊಳ್ಳುತ್ತವೆ. ಹಿಂಸೆಯನ್ನು ಪ್ರತಿಪಾದಿಸುತ್ತಿದ್ದ ನಕ್ಸಲೈಟ್ ಹಿನ್ನೆಲೆಯಿಂದ ಬಂದಿರುವ ರಾಜೀವನಿಗೆ ಹಿಂಸೆ ತ್ಯಾಜ್ಯವಾಗಿದ್ದು ಅಹಿಂಸೆಯೇ ಅಪ್ಯಾಯಮಾನವಾಗಿದೆ. ಅಹಿಂಸೆಯ ಮೂಲಕವೇ ವ್ಯವಸ್ಥೆಯೊಂದನ್ನು ಬದಲಾವಣೆ ಮಾಡಬೇಕೆಂಬ ಮಹತ್ವಾಕಾಂಕ್ಷೆ ಹೊಂದಿರುವುದು ಗೋಚರಿಸುತ್ತದೆ. ಹಿಂಸೆಯಿಂದಾಗುವ ಅನಾಹುತಗಳು ರಾಜೀವನ ಗ್ರಹಿಕೆಯಲ್ಲಿದ್ದು ಅವು ಸಂಭವಿಸದಂತೆ ಎಚ್ಚರಿಕೆ ವಹಿಸುತ್ತಾನೆ. ರಾಜೀವನ ಹೋರಾಟವು ಯಾವುದೇ ಒಬ್ಬ ವ್ಯಕ್ತಿಯ ವಿರುದ್ಧವಲ್ಲ ಏಕೆಂದರೆ ಆ ವ್ಯಕ್ತಿಯ ಸ್ಥಾನದಲ್ಲಿ ಮತ್ತೊಬ್ಬ ಉದಯಿಸಬಹುದಾದ ಸಾಧ್ಯತೆಗಳು ಹೆಚ್ಚಾಗಿರುವುದರಿಂದ ಇಡೀ ಕಾರ್ಮಿಕ ಸಮುದಾಯದಲ್ಲಿ ಜಾಗೃತಿಯನ್ನುಂಟುಮಾಡಿ ವ್ಯವಸ್ಥೆಯೊದರ ಶಾಶ್ವತ ಬದಲಾವಣೆಗೆ ಅಹಿಂಸಾತ್ಮಕ ಹೋರಾಟದ ಅಗತ್ಯತೆಯನ್ನು ಮನಗಂಡಿದ್ದಾನೆ. ಕಾದಂಬರಿಕಾರರ ತುಯ್ತವೂ ಅದೇ ಆಗಿರುವುದು ಸ್ಪಷ್ಟವಾದರೂ ಹಿಂಸೆಯೇ ಮೇಲುಗೈ ಸಾಧಿಸುವುದು ವಿಶೇಷವಾಗಿದೆ.

ಹ್ಯಾಂಡ್‌ಲೂಮ್‌ನ ಕೆಲಸಗಾರರನ್ನು ಸಂಘಟಿಸಿ ತಮ್ಮ ಸವಲತ್ತುಗಳಿಗಾಗಿ ಮುಷ್ಕರ ನಡೆಸುವ ಯಾಮಿನಿಗೆ ರಾಜೀವನ ಬೆಂಬಲ ದೊರೆತು ಕಂಪನಿಯ ಆಡಳಿತಾಧಿಕಾರಿಗಳು ಸಮಸ್ಯೆಗಳಿಗೆ ಸ್ಪಂಧಿಸುವಂತಾಗಿ ಪರಿಹಾರ ದೊರೆತು ಯಾಮಿನಿ ನೇತೃತ್ವದ ಹೋರಾಟಕ್ಕೆ ಜಯದೊರೆಯುತ್ತದೆ. ಯಾಮಿನಿಗೆ ಪಿಳ್ಳೆಯಿಂದಾಗುತ್ತಿದ್ದ ಕಿರುಕುಳವನ್ನು ಕಂಪನಿಯ ವರಿಷ್ಠರಿಗೆ ತಿಳಿಸುವ ಮೂಲಕ ಸಮಸ್ಯೆಗೆ ಪರಿಹಾರ ದೊರಕಿಸಿಕೊಡುವ ರಾಜೀವನು ಕಾರ್ಮಿಕರ ಎಲ್ಲಾ ಸಮಸ್ಯೆಗಳನ್ನು ಈ ವಿಧಾನದಲ್ಲಿಯೇ ಪರಿಹರಿಸಲು ಪ್ರಯತ್ನಿಸುವನು. ಸಿಂಟೆಕ್ಸ್ ಕಂಪನಿಯಲ್ಲಿ ಉದ್ಭವಿಸಿದ್ದ ಸಮಸ್ಯೆಯನ್ನು ಮಾತುಕತೆಯ ಮೂಲಕವೇ ಪರಿಹರಿಸುತ್ತಾನೆ. ಈ ದೃಷ್ಟಿಯಿಂದಲೇ ನಾಗೇಶಶರ್ಮ

ರಾಜೀವನನ್ನು ತನ್ನತ್ತ ಸೆಳೆದುಕೊಳ್ಳಲು ವಿಫಲ ಪ್ರಯತ್ನ ನಡೆಸುವನು ಕಾರ್ಮಿಕರ ಸಮಸ್ಯೆಗಳ ವಿಚಾರದಲ್ಲಿ ಯಾರೊಡನೆಯೂ ರಾಜಿ ಮಾಡಿಕೊಳ್ಳದ ರಾಜೀವ ಅವರ ಎಲ್ಲಾ ರೀತಿಯ ಮುಷ್ಕರಗಳಿಗೆ, ಚಳುವಳಿಗಳಿಗೆ ಹೋರಾಟಗಳಿಗೆ ಬೆಂಬಲ ಸೂಚಿಸುತ್ತಾನೆ. ದೇಶಪಾಂಡೆಯ ಪರವಾಗಿ ಮುಷ್ಕರ ನಡೆಯುವಂತಾಗಲೂ ಅದನ್ನು ಬೆಂಬಲಿಸುವುದು ಅವನ ಪ್ರಾಮಾಣಿಕತೆಗೆ ಹಿಡಿದ ಕನ್ನಡಿಯಾಗಿದೆ ಅಹಿಂಸೆಯ ಹೋರಾಟವನ್ನು ಬೆಂಬಲಿಸುವ ಆತನಿಗೆ ಮುಂಬೈ ಜಗತ್ತಿನಲ್ಲಿ ಹಿಂಸೆಯನ್ನೇ ಪ್ರತಿಪಾದಿಸುವ ದೇಶಪಾಂಡೆ ಹಾಗೂ ಯಾಮಿನಿಯವರು ಪ್ರತಿಯಾಗಿ ಬೆಳೆದು ಮೇಲುಗೈ ಸಾಧಿಸುವುದು ವಿಪರಾಸ್ಯ. ತನ್ನ ಅಸ್ತಿತ್ವ ಕ್ಷೀಣಿಸುತ್ತದೆ ಎಂಬುದು ಮನದಟ್ಟಾಗುತ್ತಿದ್ದಂತೆಯೇ ರಾಜೀವನು ಮುಂಬೈ ಜಗತ್ತಿನಿಂದ ನಿರ್ಗಮಿಸುವುದು ಅವನ ಅಹಿಂಸಾತ್ಮಕ ಹೋರಾಟದ ನಿಲುವನ್ನು ಪ್ರತಿಪಾದಿಸುತ್ತದೆ.

ಸೋಶಿಯಲಿಸ್ಟರ ತತ್ವಭ್ರಷ್ಟತೆ ಹಾಗೂ ಬಂಡವಾಳ ಶಾಹಿಗಳ ಪಿತೂರಿಯಿಂದಾಗಿ ಅಹಿಂಸಾತ್ಮಕ ಚಳುವಳಿಯು ಹಿಂಸಾರೂಪ ಪಡೆದುಕೊಳ್ಳುವ ತಿರುವನ್ನು 'ಜ್ವಾಲಾಮುಖಿಯ ಮೆಲೆ ಕಾದಂಬರಿಯಲ್ಲಿ ಕಾಣುತ್ತೇವೆ. ಕಮ್ಯುನಿಸ್ಟ್‌ನ ದುರುಗಪ್ಪಹಾಗೂ ಇನ್ನಿತರ ಕೆಲವು ಮಂದಿ ಹಿಂಸಾತ್ಮಕ ಹೋರಾಟದಲ್ಲಿ ತೊಡಗಿದ್ದಾರೆಂದು ಸೋಶಿಯಲಿಸ್ಟರು ಆರೋಪಿಸುತ್ತಾರೆ. ಆದರೆ ದುರುಗಪ್ಪ ಅನಿವಾರ್ಯ ಸನ್ನಿವೇಶದಲ್ಲಿ ಹಿಂಸಾತ್ಮಕ ಹೋರಾಟದಲ್ಲಿ ತೊಡಗಿದ್ದು ನಿಜವಾದರೂ ಹಿಂಸಾತ್ಮಕ ಹೋರಾಟವೇ ಅವನ ಗುರಿಯಲ್ಲವೆಂಬುದು ಸ್ಪಷ್ಟ. ಪುಂಡರಿಂದ ನಾಗಮ್ಮನನ್ನು ರಕ್ಷಿಸಲು ಹಿಂಸಾತ್ಮಕ ಹೋರಾಟ ಮಾಡಿ ಯಶಸ್ವಿಯಾಗುತ್ತಾನೆ. ದುರುಗಪ್ಪನ ಇಂಥ ಧೋರಣೆಯನ್ನೇ ಗುರಿಯಾಗಿರಿಕೊಂಡ ಸೋಶಿಯಲಿಸ್ಟರು ಕಮ್ಯುನಿಸ್ಟ್‌ರನ್ನು ಹಿಂಸಾವಾದಿಗಳು ಅವಿವೇಕಿಗಳು, ಬಂಡುಕೋರರು ಎಂದು ಆರೋಪಿಸುತ್ತಾರೆ.

ಆದರೆ ವಾಸ್ತವವಾಗಿ ಅಧಿಕಾರ ದಾಹಿಗಳಾದ ಸೋಶಿಯಲಿಸ್ಟರೇ ಅಧಿಕಾರಕ್ಕಾಗಿ ಹಿಂಸಾತ್ಮಕ ಹೋರಾಟದಲ್ಲಿ ಭಾಗಿಯಾಗುವ ಮತ್ತು ಅದನ್ನು ಪ್ರಚೋದಿಸುವ ಹಿಂಸಾತ್ಮಕ ಅಥವಾ ಹಿಂಸಾವಾದಿಗಳು ಆರ್ಥಿಕ ಅಸಮಾನತೆಯ ವೈಷಮ್ಯ, ಬಡಜನತೆಯ ಘೋರ ದಾರಿದ್ರ್ಯ, ಶೋಷಕರ ದಬ್ಬಾಳಿಕೆ ಸರ್ಕಾರದ ದೌರ್ಬಲ್ಯಗಳ ವಿರುದ್ಧ ಹೋರಾಟ ನಡೆಸುವುದೇ ಉಭಯ ಸಂಘಟನೆಗಳ ಪ್ರಮುಖ ಧ್ಯೇಯವಾಗಿದೆ. ಆದರೂ ಕಮ್ಯುನಿಸ್ಟರ ತತ್ವ ನಿಷ್ಟೆ ಸಾಮಾಜಿಕ ಕಳಕಳಿ ಸದೃಢ ಹೋರಾಟ ಸೋಶಿಯಲಿಸ್ಟರಲ್ಲಿ ಇರುವುದಿಲ್ಲ. ಎರಡೂ ಸಂಘಟನೆಗಳು ಪರಸ್ಪರ ತಮ್ಮ ತಮ್ಮ ತತ್ವಗಳಿಗೆ ಬದ್ಧರಾಗಿ ಆರೋಪ- ಪ್ರತ್ಯಾರೋಪಗಳಲ್ಲಿ ತೊಡಗಿದ್ದು ಇದು ಬಂಡವಾಳಶಾಹಿಗಳಿಗೆ ಪೂರಕವಾಗಿಯೇ ಸ್ಪಂದಿಸುವಂಥದ್ದಾಗಿರುತ್ತದೆ. ಶಂಕರನ ನೇತೃತ್ವದಲ್ಲಿ ಕಾರ್ಮಿಕರೆಲ್ಲರೂ ಸಭೆ ಸೇರಿ ಕಾಯಿದೆಯಂತೆ ಎಂಬ ತಾಸು ಕೆಲಸ ಮಾಡುವುದಾಗಿ ತೀರ್ಮಾನಿಸಿದರು. ಎಂದಿನಂತೆ ಹನ್ನೊಂದು ತಾಸು ಕೆಲಸ ಮಾಡುವಂತೆ ಒತ್ತಾಯ ಪಡಿಸಿದರೆ ಗಿರಣಿಯಿಂದ ಹೊರನೆಡಯಬೇಕೆಂದೂ ತೀರ್ಮಾನಿಸಲಾಯಿತು. ಅಂತೆಯೇ ಎಂಟು ತಾಸು ಕೆಲಸ ಮಾಡಿ ಹೊರಬಂದ ಕಾರ್ಮಿಕರು ಗಿರಣಿ ಮುಂದೆ ಧರಣಿ ಕುಳಿತರು. ಇದರಿಂದ ಕುಪಿತರಾದ ಗಿರಣಿಯ ಅಧಿಕಾರಿಗಳು

ಪುಂಡರನ್ನು ಕರೆಸಿ ಕಾರ್ಮಿಕರ ಮೇಲೆ ದಾಳಿ ಮಾಡಿಸಿದರು. ಶಂಕರನೂ ಸೇರಿದಂತೆ ಹಲವರಿಗೆ ಪೆಟ್ಟಾಯಿತು ಕೆಲವು ಹೆಣ್ಣು ಮಕ್ಕಳ ಮೇಲೆ ಅತ್ಯಾಚಾರವೂ ನಡೆಯಿತು ಅಧಿಕಾರಿಗಳ ಹಾಗೂ ಬಂಡವಾಳ ಶಾಹಿಗಳ ಕಿಮ್ಮಕ್ಕಿನಿಂದಕಾರ್ಮಿಕರ ಧರಣಿಯನ್ನು ಭಗ್ನಗೊಳಿಸಿ ಅವರನ್ನು ಹಿಂಸಿಸಲಾಯಿತು.

ಕಾರ್ಮಿಕರು ಮತ್ತೊಮ್ಮೆ ಮುಷ್ಕರ ಮಾಡುವ ತೀರ್ಮಾನ ಕೈಗೊಂಡಾಗ ಕಮ್ಯುನಿಷ್ಟರ ವಿರುದ್ಧ ಸೋಶಿಯಲಿಸ್ಟರು ತಿರುಗಿ ಬಿದ್ದು ಕಮ್ಯುನಿಷ್ಟರನ್ನು ಥಳಿಸುವರು ಮಾಲೀಕರ ಬೆಂಬಲಿಗರೂ ಗಲಭೆಯಲ್ಲಿ ಪಾಲ್ಗೊಂಡು ಕಮ್ಯೂನಿಷ್ಟರನ್ನು ಥಳಿಸತೊಡಗಿದರು. ಕಮ್ಯುನಿಸ್ಟ್ ಸಂಘಟನೆಯ ಹಲವು ಕಾರ್ಯಕರ್ತರಿಗೆ ಗಾಯಗಳಾಗಿ ರಕ್ತ ಸುರಿಯಲಾರಂಭಿಸಿತು ಕೆಲವು ಮಹಿಳೆಯರ ಅಪಹರಣವಾಯಿತು ಇದೆಲ್ಲಾ ಮಾಲೀಕರ ಪೈಶಾಚಿಕ ಪ್ರವೃತ್ತಿಗೆ ನಿದರ್ಶನವಾಗಿದೆ. ಕಾರ್ಮಿಕರ ಹೋರಾಟ ಘಟಿಸಿದ ಸಂದರ್ಭಗಳಲೆಲ್ಲಾ ಮಾಲೀಕರು ಸೋಶಿಯಲಿಸ್ಟರಿಗೆ ಆಮಿಷಗಳನ್ನೊಡ್ಡಿ ಕಮ್ಯೂನಿಸ್ಟರ ಮೇಲೆ ಧಾಳಿ ಮಾಡಿಸುತ್ತಿದ್ದರು. ತಮ್ಮ ಭಂಟರಿಂದ ಕೋಲಾಹಲವನ್ನುಂಟು ಮಾಡಿ ಮುಷ್ಕರದ ದಿಕ್ಕನ್ನೇ ಬದಲಾಯಿಸಿ ಬಿಡುತ್ತಿದ್ದ ಶಿಖಂಡೀ ಮಾಲೀಕರು ಒಳಗೊಳಗೆ ಖುಷಿಪಡುತ್ತಿದ್ದರು. "ಶೋಷಣೆಯೇ ಅವರು ಮೇಲೇರಲು ಕಟ್ಟಿಕೊಂಡ ಮೆಟ್ಟಿಲು ಹಣಬಲವುಳ್ಳ ಇವರು ಜನ ಬಲವನ್ನು ಕೊಂಡುಕೊಳ್ಳುವ ಸಾಮರ್ಥ್ಯವಿರುವವರು ಕಾರ್ಮಿಕರಲ್ಲಿ ಒಡಕು ಹುಟ್ಟಿಸಿ ತಮ್ಮ ಬೇಳೆ ಬೇಯಿಸಿಕೊಳ್ಳುವಲ್ಲಿ ನಿಪುಣರಾದ ಇವರು ಅತ್ಯಾಚಾರ, ಅನಾಚಾರಗಳ ಕೋಪವೂ ಆಗಿರುವವರು"[೧] ಎಂಬ ವಿಮರ್ಶೆಯ ಮಾತುಗಳು ಅರ್ಥಪೂರ್ಣವಾಗಿದೆ. ತನ್ನ ಭಂಟರ ಮೂಲಕ ರತ್ನಳನ್ನು ಅಪಹರಿಸಿ ನೀಲಾಭವನದಲ್ಲಿ ಭೋಗಿಸುವ ಸಂಚನ್ನು ರೂಪಿಸಿದ್ದ ಸದಾಶಿವಪ್ಪನು ಬಲಾತ್ಕರಿಸಲು ಮುಂದಾದಾಗ ಅವನನ್ನು ಮೂರ್ಛೆಹೋಗುವ ಹಾಗೆ ಗಾಯಗೊಳಿಸಿ ಪಲಾಯನವಾಗುವ ರತ್ನಳದು ಆತ್ಮರಕ್ಷಣೆಗಾಗಿ ಮಾಡುವ ಹೋರಾಟವಾಗಿದೆ. ಹೀಗೆ ಈ ಕಾದಂಬರಿಯಲ್ಲಿ ವರ್ಗ ಮತ್ತು ಲಿಂಗ ಸಂಬಂಧಿ ನೆಲೆಯ ಹೋರಾಟಗಳು ಅನಾವರಣ ಗೊಂಡಿದೆ.

'ಬಂಡಾಯ' ಬಲ್ಲಾಳರ ಕೊನೆಯ ಕಾದಂಬರಿಯೇ ಆದರೂ ಅವರ ಒಟ್ಟು ಸಾಹಿತ್ಯ ಸಂದರ್ಭದಲ್ಲಿ ಬಹಳ ಮುಖ್ಯವಾದದ್ದು ಮತ್ತು ಯಶಸ್ವಿಯಾದದ್ದು ಬಲ್ಲಾಳರ ಪ್ರಗತಿಶೀಲ ದೃಷ್ಟಿಕೋನವನ್ನು ಈ ಕಾದಂಬರಿಯಲ್ಲಿ ಮೊತ್ತವಾಗಿ ಕಂಡು ಕೊಳ್ಳ ಬಹುದಾಗಿರುವುದರಿಂದ ಬಂಡಾಯಾ ಕಾದಂಬರಿಯನ್ನು ಪ್ರಾತಿನಿಧಿಕ ಕೃತಿಯಾಗಿ ಸ್ವೀಕರಿಸಬಹುದು " ಕಾದಂಬರಿಯಲ್ಲಿ ನಡೆಯುವ ಮುಖ್ಯಕ್ರಿಯೆಯ ಸ್ಥೂಲ ಸ್ವರೂಪ ವರ್ಗ ಸಂಘರ್ಷದ್ದು"[೭]

ಮುಂಬಯಿನಗರದ ಮಾತ್ರ ನಾಗರೀಕತೆಯೊಳಗಿನ ಮನುಷ್ಯ ಇರುವುದು ಬಂಡವಾಳ ಶಾಹಿ ಕಾರ್ಮಿಕರ ನೆಲೆಯಲ್ಲಿ ಸಹಜವಾಗಿ ಮಾರ್ಕ್ಸ್‌ಪ್ರಜ್ಞೆಯ ವರ್ಗ ವೈರುದ್ಯದ ನೆಲೆಯನ್ನು ಬಂಡಾಯ ಮೈಗೂಡಿಸಿಕೊಂಡಿದೆ.

ಬಿ. ಭಾಸ್ಕರರಾವ್ ಅವರು ಗುರುತಿಸಿ ಕೊಂಡಿರುವಂತೆ "ಸಿದ್ಧಾಂತವೊಂದಕ್ಕೆ ಬದ್ಧವಾಗಿ ಆರಂಭವಾಗುವ

ಸಂಘಟನೆಗಳು ಚಳವಳಿಗಳು ಹೇಗೆ ಆ ಸಂಘಟನೆಯಲ್ಲಿ ತೊಡಗಿಕೊಂಡವರ ಮಾನವೀಯ ದೌರ್ಬಲ್ಯ, ಕುಟಿಲತೆ, ಸಣ್ಣತನಗಳಿಂದಾಗಿ ತಾವು ಯಾವ ಭ್ರಷ್ಟ ವ್ಯವಸ್ಥೆಯ ವಿರುದ್ಧ ಹೋರಾಡುತ್ತವೋ ಆ ವ್ಯವಸ್ಥೆಯಷ್ಟೆ ಭ್ರಷ್ಟವಾಗಿ ಹೋಗುತ್ತದೆ. ಎಂಬುದನ್ನು ವಿಶ್ಲೇಷಿಸುವ ಒಂದು ಪ್ರಯತ್ನ ವ್ಯಾಸರಾಯ ಬಲ್ಲಾಳರು ಹಲವು ವರ್ಷಗಳ ಸಮಯ ತೆಗೆದುಕೊಂಡು ಬರೆದಿರುವ ಕಾದಂಬರಿ ಬಂಡಾಯ"[೧೫] ಮೇಲ್ನೋಟಕ್ಕೆ ಅದು ವರ್ಗಸಂಘರ್ಷದ ಹೋರಾಟವನ್ನು ಕಟ್ಟುವ ಕಾರ್ಮಿಕರ ಒಗ್ಗಟ್ಟನ್ನೂ ಸೂಚಿಸುತ್ತದೆಯಾದರೂ ಕಾರ್ಮಿಕರ ನಡುವಿನ ಒಗ್ಗಟ್ಟಿನಲ್ಲಿ ಉಂಟಾಗುವ ವೈಪರಿತ್ಯಗಳನ್ನು ಬಯಲು ಮಾಡುತ್ತದೆ. ರಾಜೀವ ದೇಶ ಪಾಂಡೆ ಕಾರ್ಮಿಕರಿಗೆ ನಾಯಕತ್ವ ಒದಗಿಸಿದ್ದರೂ ರಾಜೀವ ಒಂದು ಧ್ರುವವಾದರೆ ದೇಶಪಾಂಡೆ ಮತ್ತೊಂದು ಧ್ರುವ. ದೇಶಪಾಂಡೆಯ ನಾಯಕತ್ವದ ಕಾರ್ಮಿಕ ಹೋರಾಟ ಸ್ವಾರ್ಥ ಸಾಧನೆ, ಪ್ರತಿಷ್ಠೆಯಿಂದ ಕೂಡಿರುವಂಥದ್ದಾದರೆ ರಾಜೀವನು ತತ್ವ ಸಿದ್ಧಾಂತಗಳಿಗಾಗಿ ಹೋರಾಡುವವನನಾಗಿದ್ದಾನೆ. ಈ ಇಬ್ಬರೂ ನಾಯಕರ ಪೈಕಿ ದೇಶಪಾಂಡೆಗೆ ಜಯ ದೊರಕುವುದು ವ್ಯವಸ್ಥೆಯ ವಾಸ್ತವ ಸತ್ಯವಾಗಿದೆ. ಮೂಲತಃ ನಕ್ಸಲ್ ಬಾರಿ ಚಳುವಳಿಯಲ್ಲಿ ತೊಡಗಿಕೊಂಡ ನಂತರ ಬಾಹ್ಯ ಜಗತ್ತಿನ ಕಾರ್ಮಿಕ ನಾಯಕನಾಗಿರುವ ರಾಜೀವ ಅಹಿಂಸಾವಾದಿಯಾಗಿದ್ದಾನೆ. ಮುಂಬೈಯಿ ಬಿಟ್ಟು ಹೋಗುವಲ್ಲಿ ಮತ್ತೆ ಅವನು ನಕ್ಸಲ್ ಚಳುವಳಿಯನ್ನು ಅರಸಿ ಹೋಗುವ ಸೂಚನೆ ಇದೆ. ರಾಜೀವನ ಈ ನಡವಳಿಕೆಗೆ ಬಂದೂಕಿನ ನಳಿಕೆಯಿಂದ ಮಾತ್ರ ಶಕ್ತಿ ಹುಟ್ಟುತ್ತದೆ. ಎಂಬ ಅವನ ನಂಬುಗೆಯೇ ಕಾರಣ ಅಲ್ಲದೆ ತಾನು ನಿರೀಕ್ಷಿಸುವ ಕ್ರಾಂತಿ ಅಹಿಂಸಾ ಮಾರ್ಗದಲ್ಲಿ ಸಿಗದೇ ಹೋಗುವುದು ಸಹ ಅವನ ಆ ನಿರ್ಧಾರಕ್ಕೆ ಕಾರಣವಾಗಿದೆ.

೧. ಡಾ. ಬಸವರಾಜ ಸಾಧರ, ಬಸವರಾಜ ಕಟ್ಟೀಮನಿಯವರ ಕಾದಂಬರಿಗಳು, ವೀರಶೈವ ಅಧ್ಯಯನ ಅಕಾಡಮಿ, ಶ್ರೀ ನಾಗನೂರು, ರುದ್ರಾಕ್ಷಿ ಮಠ, ಬೆಳಗಾಂ, ೨೦೦೦, ಪುಟ ೧೦೦

೨. ಬಸವರಾಜ ಕಟ್ಟೀಮನಿ, ಜ್ವಾಲಮುಖಿಯ ಮೇಲೆ, ಶಾರದಾ ಪ್ರಕಾಶನ ಬೆಂಗಳೂರು, ೧೯೫೪, ಪುಟ ೮೨,

೩. ಮಾಲತಿ ಪಟ್ಟಣ ಶೆಟ್ಟಿ, ಬಸವರಾಜ ಕಟ್ಟೀಮನಿ, ಸಾಹಿತ್ಯ ಅಕಾಡಮಿ, ಬೆಂಗಳೂರು ೧೯೯೯, ಪುಟ೮೨,

೪. ಡಾ. ಬಸವರಾಜ ಸಾಧರ, ಬಸವರಾಜ ಕಟ್ಟೀಮನಿಯವರ ಕಾದಂಬರಿಗಳು, ವೀರಶೈವ ಅಧ್ಯಯನ ಅಕಾಡಮಿ, ಶ್ರೀ ನಾಗನೂರು, ರುದ್ರಾಕ್ಷಿ ಮಠ, ಬೆಳಗಾಂ, ೨೦೦೦, ಪುಟ ೧೦೧

೫. ಪ್ರಧಾನ ಸಂದಾಪಕರು, ಡಾ. ಗುರುಲಿಂಗ ಕಾ.ಪ.ಸೆ. ಸಂ. ಜಿ.ಎಸ್. ಸಿದ್ಧಲಿಂಗಯ್ಯ, ಎಂ.ಹೆಚ್. ಕೃಷ್ಣಯ್ಯ, ಸಾಲುದೀಪಗಳು, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೧, ಪುಟ ೪೦೦

೬. ಸಂ. ಡಾ. ಹಾ.ಮ.ನಾ., ಮತ್ತು ಲೇ. ಪ್ರಧಾನಗುರುದತ್ತ, ಲೇ. ಡಾ. ವಿಜಯ ಲಕ್ಷ್ಮಿ ವ್ಯಾಸರಾಯ ಬಲ್ಲಾಳ, ನವಕರ್ನಾಟಕ ಪಬ್ಲಿಕೇಷನ್,ಬೆಂಗಳೂರು, ೨೦೦೧, ಪುಟ ೭೭

೭. ಸಂ.ಕು.ಶಿ.ಹರಿದಾಸ ಭಟ್ಟ, ಬಲ್ಲಾಳರ ಕಾದಂಬರಿಗಳು, ಕೆಲವು ಅಧ್ಯಯನಗಳು, ಗೀತಾ ಬುಕ್‌ಹೌಸ್, ಮೈಸೂರು.೧೯೯೮. ಪುಟ ೧೪.

೮. ಸಂ. ದೇ.ಜೆ.ಗೌ ಮತ್ತು ಸಿ.ಪಿ.ಕೆ. ಕಟ್ಟೀಮನಿ ಬದುಕು ಬರಹ, ಗೀತಾ ಬುಕ್ ಹೌಸ್ ಮೈಸೂರು,೧೯೯೮, ಪುಟ ೩೩.

೯. ಸಂ. ಡಾ. ಹಾ.ಮ.ನಾ., ಮತ್ತು ಲೇ. ಪ್ರಧಾನಗುರುದತ್ತ, ಲೇ. ಡಾ. ವಿಜಯ ಲಕ್ಷ್ಮಿ ವ್ಯಾಸರಾಯ ಬಲ್ಲಾಳ, ನವಕರ್ನಾಟಕ ಪಬ್ಲಿಕೇಷನ್,ಬೆಂಗಳೂರು, ೨೦೦೧, ಪುಟ ೧೧೧

೧೦. ಎಲ್ ಎಸ್ ಶೇಷಗಿರಿರಾವ್, ಹೊಸಗನ್ನಡ ಸಾಹಿತ್ಯ ಚರಿತ್ರೆ ಅಂಕಿತ ಪುಸ್ತಕ ಬೆಂಗಳೂರು ೨೦೦೨ ಪುಟ ೬೪.

೧೧. ಸಂ. ದೇ.ಜ.ಗೌ ಮತ್ತು ಸಿ.ಪಿ.ಕೆ. ಕಟ್ಟಿಮನಿ ಬದುಕು ಬರಹ, ಪ್ರಕಾಶಕರು ಗೀತಾ ಬುಕ್ ಹೌಸ್ ಮೈಸೂರು ೧೯೯೮, ಪು. ೩೫೦

೧೨. ಬಸವರಾಜಕಟ್ಟಿಮನಿ, ಜ್ವಾಲಾಮುಖಿಯ ಮೇಲೆ, ಶಾರದಾ ಪ್ರಕಾಶನ ಬೆಂಗಳೂರು ೧೯೫೯ ಪುಟ೧೮೩

೧೩. ಡಾ|| ಬಸವರಾಜ ಸಾದರ, ಬಸವರಜಾ ಕಟ್ಟೀ ಮನಿಯವರ ಕಾದಂಬರಿಗಳು ವೀರಶೈವ ಅಧ್ಯಯನ ಅಕಾಡೆಮಿ ಶ್ರೀನಾಗನೂರು ರುದ್ರಾಕ್ಷಿಮಠ ಬೆಳಗಾಂ ೨೦೦೦ ಪುಟ. ೧೦೩

೧೪. ಜಿ.ಎಸ್ ಅಮೂರ ಕನ್ನಡ ಕಥನ ಸಾಹಿತ್ಯ : ಕಾದಂಬರಿ ಶ್ರೀ ಹರಿ ಪ್ರಕಾಶನ ದಾರವಾಡಿ ೧೯೯೪. ಪುಟ ೨೩೯.

೧೫. ಕು. ಶಿ ಹರಿದಾಸ ಭವ್ಯ (ಸಂ) ಬಲ್ಲಾಳರ ಕಾದಂಬರಿಗಳು- ಕೆಲವು ಅಧ್ಯಯನಗಳು ಗೀತಾಬುಕ್ ಹೌಸ್, ಮೈಸೂರು ೧೯೮೮ ಪುಟ ೪೨.

ಅಧ್ಯಾಯ ೬

# ಉಪಸಂಹಾರ

ಸಾಹಿತ್ಯ ಚಳುವಳಿಗಳು ಮತ್ತು ಕಾಲಮಾನಬದಲಾವಣೆಗಳು ಕನ್ನಡ ಸಾಹಿತ್ಯದ ದಿಕ್ಕನ್ನು ನಿಸ್ಸಂಶಯವಾಗಿ ಪರಿವರ್ತಿಸಿವೆ.ಅದರಲ್ಲೂ ನವೋದಯ ಸಾಹಿತ್ಯ ಪಡೆದ ಪಡೆಯುತ್ತಿದ್ದ ಸ್ಥಾನಮಾನಗಳು ಪ್ರಗತಿಶೀಲ ಸಂದರ್ಭದಲ್ಲಿ ದಿಡೀರನೆ ವ್ಯತ್ಯಾಸಗೊಂಡಿತು. ಪ್ರಗತಿಶೀಲ ಸಾಹಿತಿಗಳು ಸಾಹಿತ್ಯವನ್ನು ಗ್ರಹಿಸಿದ ಮತ್ತು ಸೃಜಿಸಿದ ರೀತಿಯ ನವೋದಯ ಕತೆಗಾರರಿಗಿಂತ ಭಿನ್ನವಾಯಿತು. ಕಾದಂಬರಿಗೆ ಒಗ್ಗದ ಆದರೆ ಬೇರೆಬೇರೆ ತುರ್ತುಗಳಿಗಾಗಿ ಬರೆಯಬೇಕಾದ ಸಂದರ್ಭದಲ್ಲೆಲ್ಲ ಪ್ರಗತಿಶೀಲ ಲೇಖಕರು ಕಾದಂಬರಿ ಮತ್ತು ಸಣ್ಣಕತೆಯ ಪ್ರಕಾರವನ್ನು ಆಯ್ದುಕೊಂಡರು. ಆ ಕಾಲದ ಪರಿಸರ ಕೂಡ ಇದರ ಜರೂರುತನಕ್ಕೆ ಸಹಾಯಮಾಡಿತು ನಿರಂಜನರಂಥ ಬರಹಗಾರರು ಬಹುತೇಕ ಬರಹಗಳು ಪತ್ರಿಕೆಯ ತುರ್ತು ಮತ್ತು ಬರಹಗಾರನ ತುರ್ತು ಇವನ್ನು ಆಧರಿಸಿಯೇ ಬರೆದವೆಂಬುದನ್ನು ಗಮನಿಸಿದಾಗ ಈ ವಿಚಾರ ಹೆಚ್ಚು ಸ್ಪಷ್ಟವಾಗುತ್ತದೆ.

ಕಟ್ಟೀಮನಿ, ನಿರಂಜನ, ಚದುರಂಗ, ಅನಕೃ ಮತ್ತು ತರಾಸು ಈಐವರ ಸಾಹಿತ್ಯ ಪ್ರಗತಿಶೀಲ ಸಂದರ್ಭದಲ್ಲಿ ಬಂದಾಗ ಅಂದಿನ ಓದುಗರ ಮತ್ತು ವಿಮರ್ಶಕರ ಪ್ರತಿಕ್ರಿಯೆಗಳು ತೀರಾ ಗಂಬೀರವಾಗಿಯೇನೂ ಇರಲಿಲ್ಲ. ಪ್ರಗತಿಶೀಲ ಸಾಹಿತ್ಯ ಚಳುವಳಿಯ ಬಿರುಸು ಬರಾಟೆಗಳು ಸಾವದಾನ ವಿಮರ್ಶೆಯನ್ನು ಮಾಡಿನೋಡುವಲ್ಲಿಯೂ ದೊಡ್ಡ ತೊಡಕಾದವು. ಈ ನಿಬಂದದಲ್ಲಿ ಮೊದಲಿಗೆ ಪಾಶ್ಚಾತ್ಯರಲ್ಲಿ ಪ್ರಗತಿಶೀಲ ಸಾಹಿತ್ಯದ ಪರಿಕಲ್ಪನೆಯನ್ನು ಸ್ಥೂಲವಾಗಿ ನೋಡಲಾಗಿದೆ. ಪ್ರಗತಿಶೀಲ ಪರಿಕಲ್ಪನೆ ಮೊದಲು ಪಾಶ್ಚಾತ್ಯರಲ್ಲಿ ಮೊಳಕೆಯೊಡೆದು ನಂತರ ಅದು ಇತರ ದೇಶಗಳಿಗೂ ವ್ಯಾಪಿಸಿತು. ಇಲ್ಲಿ ಪ್ರಗತಿಶೀಲ ಪಂಥ'ದ ಏಳಿಗೆಗೆ ಕಾರಣವಾದ ಕಾರ್ಮಿಕಬಂಡವಾಳಶಾಯಿಗಳ ಉಗಮ, ಕಾರ್ಮಿಕರ ಶೋಷಣೆ, ಮಾರ್ಕ್ಸ್ ವಾದದ ಪ್ರಭಾವಗಳನ್ನು ಚರ್ಚಿಸಲಾಗಿದೆ. ಪ್ರಗತಿಶೀಲ ಸಾಹಿತ್ಯದ ಉಗಮವನ್ನು ನಾವು ಈ ಪಾಶ್ಚಾತ್ಯರಲ್ಲಿ ಕಾಣಬಹುದಾಗಿದೆ.

ಈ ನಿಬಂದದಲ್ಲಿ ಎರಡನೆಯದಾಗಿ ಪ್ರಗತಿಶೀಲ ಸಾಹಿತ್ಯದ ಒಲವುನಿಲುವುಗಳನ್ನು ಕುರಿತು ಸ್ಥೂಲವಾಗಿ ನೋಡಲಾಗಿದೆ. ಪ್ರಗತಿಶೀಲ ಬರಹಗಾರರ ಒಗ್ಗಟ್ಟಿನ ವೇದಿಕೆ ನಿರ್ಮಾಣವಾಗಲೀ, ಅದರ ಬದುಕು ಜನಗಳಿಗಳಿಗಾಗಲೀ,ಅವರ ಸಾಹಿತ್ಯದ ವಸ್ತು- ರೀತಿಗಳ ಮೇಲೆ ಬೀರಿದ ಪರಿಣಾಮವನ್ನು ನೋಡಿದರೆ ಆಗಬೇಕಾದಷ್ಟು ಪರಿವರ್ತನೆ ಆಗಲಿಲ್ಲವೆಂದುದೂ ಹೇಳಬೇಕಾಗಿದೆ.

ಪ್ರಗತಿಶೀಲ ಸಾಹಿತ್ಯ ಪ್ರಧಾನವಾಗಿ ಪ್ರಜ್ಞಾಪೂರ್ವಕ ಸೃಷ್ಟಿ, ಸಾಹಿತ್ಯ ರಚನೆ ಪ್ರಜ್ಞಾಪೂರ್ವಕ ನೆಲೆಯಲ್ಲಿ ಸೃಷ್ಟಿಯಾದಾಗ ಆಗುವ ಅಪಾಯಗಳೆಲ್ಲ ಇವರ ಸಾಹಿತ್ಯ ಕೃತಿಗಳಲ್ಲಿ ಇದ್ದೇ ಇವೆ. ಆ ಅಪಾದನೆಗಳನ್ನುಮಾಡುವುದಾದರೆ ಸಮಸ್ಯೆಯ ಸರಳೀಕರಣ, ಸಿನಿಮೀಯ ಅಂತ್ಯ ಅಥವಾ ಪರಿಹಾರ, ಸಾಹಿತ್ಯವು ಪ್ರಚಾರ ಸಾಮಗ್ರಿಯಾದ ದುರಂತ ಆಳವಾದ ವಿವೇಚನೆ ಕಾಣದ ಮೇಲು ಮೇಲಿನ ಭಾವಾತ್ಮಕಸ್ತರದ ಚಿತ್ರಣ ಇತ್ಯಾದಿ.

ಪ್ರಗತಿಶೀಲ ಸಾಹಿತ್ಯದ ಒಲವು ನಿಲುವುಗಳನ್ನು ರೂಪಿಸಿದ ಪ್ರಧಾನ ವ್ಯಕ್ತಿಗಳಾಗಿ ನಿರಂಜನ, ಕಟ್ಟೀಮನಿ, ಚದುರಂಗ, ಅನಕೃ, ತರಾಸು ಕಂಡುಬರುತ್ತಾರಾದರೂ ಆ ಅಲೆಯ ತರುವಾಯವೂ ಅವರು ಬರೆದ ಸಾಹಿತ್ಯ ಕೃತಿಗಳಲ್ಲಿ ಅಂಶತಃ ಅದರ ವಾಸನೆಯಿದೆ. ಚದುರಂಗ ನಿರಂಜನರು ಮಾನವತಾ ಪ್ರಗತಿಶೀಲತೆಯನ್ನು ಬರುಬರುತ್ತಾ ಹೆಚ್ಚು ರೂಡಿಸಿಕೊಂಡಿದ್ದು ಇದಕ್ಕೆ ಸಾಕ್ಷಿ ಪ್ರಗತಿಶೀಲ ಸಾಹಿತ್ಯದ ಸಂಘಟನೆ ಸಂವಹನಗಳಲ್ಲಿ ಈ ಐವರ ಪಾತ್ರ ಗಣನೀಯವಾದುದು.

ಪ್ರಗತಿಶೀಲ ಸಾಹಿತ್ಯದ ಧೋರಣೆಗಳು ರೂಪುಗೊಂಡದ್ದಕ್ಕೆ ಇರುವ ಪ್ರಭಾವಗಳು ಏನೇ ಇರಲಿ ಆ ಧೋರಣೆಗಳೊಳಗಿನ ಪ್ರಚಾರ ಸಾಧನದ ಅಂಶಗಳು ಮತ್ತು ಸಾಹಿತ್ಯವೊಂದನ್ನೇ ಬಳಸಿಕೊಂಡ ಮನಸ್ಸುಗಳು ಇವೆರಡು ಚಳುವಳಿಯ ಯಶಸ್ಸಿಗೆ ತೊಡಕಾದವು ಆ ಮಟ್ಟಿಗೆ ಸೀಮಿತತೆ ಪ್ರಾಪ್ತವಾಯಿತು. ಅಂದರೆ ಪ್ರಗತಿಶೀಲದ ಇತಿಮಿತಿಗಳನ್ನು ನಾವು ಗುರುತಿಸಿದರೂ ಸಹ ಅದರಾಚೆಗೂ ಮಾಡಿದ ಕೆಲವು ಸಾಧನೆಗಳತ್ತ ಗಮನಹರಿಸಬೇಕಿದೆ.

ಕನ್ನಡ ಕಥಾಪರಂಪರೆ ಮತ್ತು ಸಣ್ಣಕತೆಗಳ ತಾಂತ್ರಿಕ ಸ್ವರೂಪದ ಹಿನ್ನೆಲೆಯಲ್ಲಿ ಪ್ರಗತಿಶೀಲರ ಕತೆಗಳನ್ನು ಪರಿಶೀಲಿಸಿದಾಗ ಹೆಚ್ಚು ನಿರಾಶೆಯೆ ಆಗುತ್ತದೆ. ಕನ್ನಡ ಕಥಾ ಪರಂಪರೆಯೊಂದಿಗೆ ಪ್ರಗತಿಶೀಲ ಲೇಖಕರು ಇಟ್ಟುಕೊಂಡ ಸಂಬಂಧ ಅಂಥ ಗಂಭೀರವಾಗಿಯೇನು ಇರಲಿಲ್ಲ. ಜೀವನ ಚಿತ್ರಣ ಆ ಮೂಲಕ ಸಾಧ್ಯವಾಗಬಹುದಾದ ಲೇಖಕನ ವೈಯುಕ್ತಿಕ ವ್ಯಾಖ್ಯಾನಗಳಷ್ಟೆ ಪ್ರಗತಿಶೀಲ ಸಂದರ್ಭದಲ್ಲಿ ವಿಜೃಂಬಿಸಿದವು. ಧೋರಣೆ ಬಲವಾಗಿ ಕಥನಕಲೆ ಸೊರಗಿತು. ಧನಾತ್ಮಕ ಆಲೋಚನೆಗಳನ್ನು ಹುಡುಕಿದರೆ ಮಾತ್ರ ಇವರ ಕತೆಗಳ ಗೆಲುವನ್ನು ಒಂದಷ್ಟು ಕಾಣಲು ಸಾಧ್ಯ. ಇವರ ಕತೆಗಳು ಜೀವನ ಚಿತ್ರಣದತ್ತ ಮುಖ ಮಾಡಿದವು.ಜೀವನಶೋಧನೆ ಮುಖ್ಯವಾಗಲಿಲ್ಲ. ಇವರ ಕಾದಂಬರಿಗಳನ್ನು ಗಮನಿಸಿದಾಗ ಈ ಕಾದಂಬರಿಗಳು ವರ್ಗದ ನೆಲೆಯ ಚಿತ್ರಣವನ್ನು ಉತ್ತಮವಾಗಿ ಬಿಂಬಿಸಿದರು ಅಷ್ಟು ಪರಿಣಾಮಕಾರಿಯಾಗಿ ಮೂಡಿ ಬಂದಿಲ್ಲ.

ಆ ಕಾಲಕ್ಕೂ ಈ ಕಾಲಕ್ಕೂ ಕಡುವಾಸ್ತವಗಳೆನಿಸಿದ ವರ್ಗ ವೈರುದ್ಯಗಳು ಪ್ರಗತಿಶೀಲರ ಕತೆಗಳಲ್ಲಿ ಮತ್ತು ಕಾದಂಬರಿಗಳಲ್ಲಿ ಸಾಕಷ್ಟು ಪ್ರಾಮಾಣದಲ್ಲಿಯೇ ವ್ಯಕ್ತವಾಗುತ್ತದೆ. ಮೆಲ್ನೋಟಕ್ಕೆ ವರ್ಗ ವ್ಯತ್ಯಾಸಗಳನ್ನು ಪ್ರಗತಿಶೀಲ ಸಾಹಿತಿಗಳು ದಾಖಲಿಸಿದ್ದಾರೆ. ಪ್ರಗತಿಶೀಲ ಧೋರಣೆಯನ್ನು ಬಹುತೇಕ ಕಟ್ಟಿಕೊಟ್ಟದ್ದು ವರ್ಗನೆಲೆಯ ಅಸಮಾನತೆಗಳನ್ನು ಈ ಅಸಮಾನತೆ ನಿರ್ಗಮವಾಗಿ ಶೋಷಿತವರ್ಗ ಕಳಕೊಂಡ ಎಲ್ಲಾ ಸೌಲಭ್ಯ, ತೃಪ್ತಿಗಳನ್ನು ಪಡೆಯುವತನಕ ಸಮಾಜದಲ್ಲಿ ಕ್ರಾಂತಿ ಹಸುರಾಗಿರುತ್ತದೆಂಬ, ಭಾವನೆ ಪ್ರಗತಿಶೀಲರದು ಕಟ್ಟೀಮನಿ ನಿರಂಜನ ಕತೆಗಳಲ್ಲಿ ವ್ಯಕ್ತವಾದ ವರ್ಗ ಪ್ರಶ್ನೆ ಹೆಚ್ಚಾಗಿ ಮಧ್ಯಮವರ್ಗದ ಕಷ್ಟಗಳನ್ನು ಆಧರಿಸಿವೆ. ಆದರೆ ಈ ನಿಟ್ಟಿನಲ್ಲಿ ಬಂದ ಬರಹಗಳಲ್ಲಿ ಶೋಷಿತರಪರದನಿಯಲ್ಲೇ ಅಭಿವ್ಯಕ್ತವಾಗಿದ್ದು ಡಾಳಾದ ವೈದೃಶ್ಯಗಳ ಮೂಲಕ ವಾಸ್ತವತೆಯನ್ನು ವಿಜೃಂಬಿಸುವ ಕೆಲಸವನ್ನು ಮಾಡಿವೆ.

ಮಾರ್ಕ್ಸ್‌ವಾದದಂಥ ಶೋಷಿತಪರ ರಾಜಕೀಯಾರ್ಥಿಕ ಸಿದ್ಧಾಂತವು ಭಾರತದ ಶ್ರೇಣಿಕರಣ ಸಮಾಜವನ್ನು ಅರ್ಥಮಾಡಿಕೊಳ್ಳುವ ಸಾಧ್ಯತೆ ತುಂಬಾ ಕಡಿಮೆ, ಭಾರತದಲ್ಲಿ ಜಾತಿ ಮತ್ತು ವರ್ಗಗಳು ಪರಸ್ಪರ ತಳುಕು ಹಾಕಿಕೊಂಡೇ ಇರುವುದರಿಂದಾಗಿ ಮಾರ್ಕ್ಸ್‌ವಾದ ಹೇಳುವ ವರ್ಗ ಸಂಘರ್ಷ ಭಾರತದಲ್ಲಿ ಆ ಮಟ್ಟಿಗೆ ಪಾಕ್ಷಿಕ ನೆಲೆಯೊಂದನ್ನಷ್ಟೆ ದೃಷ್ಟಿಯಲ್ಲಿಟ್ಟುಕೊಂಡುದ್ದಾಗುತ್ತದೆ. ಪ್ರಗತಿಶೀಲರು ತಮ್ಮ ಕತೆ ಮತ್ತು ಕಾದಂಬರಿ ಸಾಹಿತ್ಯದಲ್ಲಿ ಜಾತಿ ಸಂಘರ್ಷಗಳನ್ನಾಗಲೀ, ಸೌಹಾರ್ದನೆಲೆಯನ್ನಾಗಲೀ ಗಮನಕ್ಕೆ ತಂದುಕೊಳ್ಳಲಿಲ್ಲ. ಒಟ್ಟಾರೆ ಸಾಮಾಜಿಕ ಆಶಯಗಳಿಗೆ ಈ ಲೇಖಕರ ಕತೆ, ಕಾದಂಬರಿಗಳು ಸ್ಪಂದಿಸಿದ ಬಗೆ ಆ ಕಾಲದ ತುರ್ತುಗಳನ್ನು ಹೇಳುವುದರೊಟ್ಟಿಗೆ ವ್ಯಕ್ತಿ ಮತ್ತು ಸಮಾಜದ ನಡುವಿನ ಸಂಬಂಧಗಳ ಸ್ವರೂಪವನ್ನು ಡಾಳಾಗಿ ಚಿತ್ರಿಸಿಕೊಡುತ್ತವೆ.

ಒಟ್ಟಾರೆ ಈ ನಿಬಂದದ ಅಧ್ಯಯನಕ್ಕೆ ನಿರಂಜನ, ಚದುರಂಗ, ಕಟ್ಟೀಮನಿಯವರ ಕೆಲವು ಕತೆ ಮತ್ತು ಕಾದಂಬರಿಗನ್ನು ತೆಗದುಕೊಂಡಿರುವುದು ಪ್ರಗತಿಶೀಲ ಸಾಹಿತ್ಯ ಚಳುವಳಿಗೆ ಚೌಕಟ್ಟನ್ನು ಹಾಕಿಕೊಳ್ಳುವುದು ಒಂದು ರೀತಿಯಲ್ಲಿ ದಿಗ್ಬಂಧನ ಮಾಡಿದಂತೆಯೇ ಆದರೆ ಈ ಮೂವರು ಲೇಖಕರು ಆ ಆಂದೋಲನದ ದಿನಗಳನ್ನು ಹಾದು ಬಂದಿರುವುದು ಖಚಿತವಿರುವಾಗ ಈ ಹಿನ್ನೆಲೆಯಲ್ಲಿ ಇವರ ಕೆಲವು ಸಾಹಿತ್ಯ ಕೃತಿಗಳನ್ನು ಮಾತ್ರ ಸ್ಥೂಲವಾಗಿ ನೋಡಲಾಗಿದೆ. ಆದರೆ ಈ ನಿಟ್ಟಿನಲ್ಲಿ ಇನ್ನೂ ಪ್ರಯತ್ನಗಳು ಸಾಗಬೇಕಿದೆ.

* * * * * *

## ಪರಾಮರ್ಶನ ಗ್ರಂಥಗಳು


೧. ಎಲ್.ಎಸ್. ಶೇಷಗಿರಿ ರಾವ್ — ಹೊಸಗನ್ನಡ ಸಾಹಿತ್ಯ ಚರಿತ್ರೆ, ಪ್ರಕಾಶಕರು ಅಂಕಿತ ಪುಸ್ತಕಗಳು ಪ್ರಕಾಶಕರು, ಬೆಂಗಳೂರು ೨೦೦೨

೨. ಹೆಚ್.ಎಸ್. ರಾಘುವೇಂದ್ರರಾವ್, — ಪ್ರಗತಿ ಶೀಲತೆ, ಕರ್ನಾಟಕ ಸಾಹಿತ್ಯ ಅಕಾಡೆಮಿ ೧೯೯೨.

೩. ಶೀತಾ ಶರ್ಮ — ರಷನ್ ಸಾಹಿತ್ಯ ಪರಿಚಯ ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು ೧೯೭೮.

೪. ಕೀರ್ತಿನಾಥ ಕುರ್ತಕೋಟಿ — ಯುಧರ್ಮ ಮತ್ತು ಸಾಹಿತ್ಯ ದರ್ಶನ ಮನೋಹರಗ್ರಂಥ ಮಾಲೆ ಧಾರವಾಡ ೧೯೯೧.

೫. ಅನಕೃಷ್ಣರಾಯ — ಪ್ರಗತಿಶೀಲ ಸಾಹಿತ್ಯ, ಪ್ರಗತಿಶೀಲ ಲೇಖಕರ ಸಂಘ, ಬೆಂಗಳೂರು ೧೯೪೪.

೬. ದೇಜಗೌ ೬ ಸಿಪಿಕೆ ಸಂ. — ಕಟ್ಟೀಮನಿ ಬದುಕು ಬರಹ ಗೀತಾಬುಕ್ ಹೌಸ್, ಮೈಸೂರು ೧೯೬೫.

೭. ನಿರಂಜನ — ಬುದ್ಧಿ ಭಾವ ಬದುಕು ಸ್ಪಂದನ ಪ್ರಕಾಶನ, ಬೆಂಗಳೂರು ೧೯೮೪

೮ ಜಿ.ಎಸ್. ಅಮೂರ — ಕನ್ನಡ ಕಥನ ಸಾಹಿತ್ಯ, ಕಾದಂಬರಿ ಶ್ರೀಹರಿ ಪ್ರಕಾಶನ, ಧಾರವಾಡ ೧೯೯೪.

೯. ರಾಘುವೇಂದ್ರ ರಾವ್ ಎಚ್.ಎಸ್. — ಪ್ರಗತಿ ಶೀಲತೆ ಕರ್ನಾಟಕ ಸಾಹಿತ್ಯ ಅಕಾಡಮಿ ೧೯೯೦.

೧೦. ಬಸರಾಜ ಕಟ್ಟೀಮನೀ — ಸೆರೆಯಿಂದ ಹೊರಗೆ,
ಮದಿಪು ಪ್ರಕಾಶನ ಮಂಗಳೂರು.
೧೯೪೫.

೧೧. ತಾರಾ ಸುಬ್ಬರಾವ್ — ರೂಪಸಿ,
ಆನಂದ ಬ್ರದರ್ಸ್,
ಬೆಂಗಳೂರು ೧೯೪೬.

೧೨. ತಾರಾ ಸುಬ್ಬರಾವ್ — ತೊಟ್ಟಿಲು ತೂಗಿತು,
ಪದ್ಮಾ ಪ್ರಕಾಶನ ಹೈದ್ರಾಬಾದ್, ೧೯೪೨

೧೩. ತಾರಾ ಸುಬ್ಬರಾವ್ — ಗಿರಿ ಮಲ್ಲಿಗೆಯ ನಂದನದಲ್ಲಿ
ವಿಶಾಲ ಸಾಹಿತ್ಯ ಮಾಲೆ
ಮೈಸೂರು ೧೯೪೪.

೧೪. ಅ.ನ.ಕಷ್ಣರಾಯ — ಅನ ಮಿಂಚು,
ಮಾಧವ ಸನ್ಸ್,
ಬೆಂಗಳೂರು ೧೯೩೦

೫. ಅ.ನ.ಕಷ್ಣರಾಯ, — ಕಿಡಿ
ಆನಂದ ಬ್ರದರ್ಸ್ ಬೆಂಗಳೂರು ೧೯೩೧

೧೬. ಅ.ನ.ಕಷ್ಣರಾಯ, — ಕಾಮನ ಸೋಲು
ಎಚ್. ಎನ್ ಬುಕ್ ಡಿಪೋ,
ಬೆಂಗಳೂರು ೧೯೪೨.

೧೭. ಅ.ನ.ಕಷ್ಣರಾಯ, — ಪಾಪ ಪುಣ್ಯ,
ಎಚ್. ಎನ್ ಬುಕ್ ಡಿಪೋ,
ಬೆಂಗಳೂರು ೧೯೪೩.

೧೮ ಅ.ನ.ಕಷ್ಣರಾಯ, — ಅಗ್ನಿ ಕನ್ಯೆ,ಎಚ್. ಎನ್ ಬುಕ್ ಡಿಪೋ,
ಬೆಂಗಳೂರು ೧೯೭೩.

೧೯ ಅ.ನ.ಕೃಷ್ಣರಾಯ, ಶಿಲ್ಪಾ, ಆನಂದ ಬ್ರದರ್ಸ್,
ಬೆಂಗಳೂರು ೧೯೫೦.

೧೦ ಅ.ನ.ಕೃಷ್ಣರಾಯ, ಸಮರ ಸುಂದರಿ,
ಆನಂದ ಬ್ರದರ್ಸ್,
ಬೆಂಗಳೂರು ೧೯೬೨

೨೧ ಅ.ನ.ಕೃಷ್ಣರಾಯ, ಸ್ವಪ್ನ ಸುಂದರಿ
ಶಾರದಾ ಪ್ರಕಟಣಾಲಯ,ಬೆಂಗಳೂರು, ೧೯೪೮

೨೨. ಚದುರಂಗ, ಶವದ ಮನೆ
ಶಾರಾದ ಪ್ರಕಟಣಾಲಯ, ೧೯೫೬.

೨೩ ಚದುರಂಗ, ಬಂಗಾರದ ಗೆಜ್ಜೆ,
ಶಾರಾದ ಪ್ರಕಟಣಾಲಯ, ೧೯೫೧.

೨೪ ಚದುರಂಗ, ಮೀನಿನ ಹೆಜ್ಜೆ,
ಶಾರಾದ ಪ್ರಕಟಣಾಲಯ, ೧೯೫೮.

೨೫. ಚದುರಂಗ, ಬಣ್ಣದ ಬೊಂಬೆ ಮತ್ತು ಇತರ ಕಥೆಗಳು,
ಗೀತಾ ಬುಕ್‌ಹೌಸ್
ಮೈಸೂರು, ೧೯೬೧.

೨೬. ಚದುರಂಗ, ಮೃಗಾಯಾ, ಪುಸ್ತಕ ಪ್ರಕಾಶನ
ಮೈಸೂರು ೧೯೯೪

೨೭. ನಿರಂಜನ, ಬನಶಂಕರಿ ಕಥಾ ಸಾಹಿತ್ಯ
ಬೆಂಗಳೂರು ೧೯೫೪.

೨೮. ಬಸವರಾಜ ಕಟ್ಟೀಮನೀ, ಕಾರವಾನ್
ಶಾರಾದ ಪ್ರಕಾಶನ
ಬೆಂಗಳೂರು ೧೯೪೫

೨೯. ಬಸವರಾಜ ಕಟ್ಟಿಮನಿ, ಆಗಸ್ಟ್ ಒಂಭತ್ತು ಮತ್ತು ಇತರ ಕಥೆಗಳು
ಶಾರಾದ ಪ್ರಕಾಶನ,
ಬೆಂಗಳೂರು ೧೯೪೭

೩೦. ಬಸವರಾಜ ಕಟ್ಟಿಮನಿ, ಸೆರೆಯಿಂದ ಹೊರಗೆ,
ಶಾರದ ಪ್ರಕಾಶನ
ಬೆಂಗಳೂರು ೧೯೪೯

೩೧. ಬಸವರಾಜ ಕಟ್ಟಿಮನಿ, ಜೋಳದ ಬೆಲೆಯ ನಡುವೆ,
ಶಾರಾದ ಪ್ರಕಾಶನ ೧೯೫೩.

೩೨. ಬಸವರಾಜ ಕಟ್ಟಿಮನಿ, ಸುಂಟರ ಗಾಳಿ,
ಶಾರಾದ ಪ್ರಕಾಶನ ೧೯೫೭

೩೩. ಬಸವರಾಜ ಕಟ್ಟಿಮನಿ, ಸೈನಿಕನ ಹೆಂಡತಿ
ಕಾದಂಬರಿ ಪ್ರಕಾಶನ ಧಾರವಾಡ ೧೯೬೬

೩೪. ಬಸವರಾಜ ಕಟ್ಟಿಮನಿ, ಗರಡಿಯಾಳು
ಸಾಹಿತ್ಯ ಶ್ರೀ ಧಾರವಾಡ ೧೯೭೫

೩೫. ಅರ್ಕೆ ಕನ್ನಡ ಪ್ರಗತಿಶೀಲ ಸಾಹಿತ್ಯ ಸ್ಥೂಲ ಚಿತ್ರ,
ಸಾಹಿತ್ಯ, ಆಶಯ, ವಿನ್ಯಾಸ,
ಸಂಕ್ರಮಣ ಪ್ರಕಾಶನ ಧಾರವಾಡ ೧೯೮೮.

೩೬. ಶ್ರೀನಿವಾಸ ರಾಜು ಚಿ. ಪ್ರಗತಿಶೀಲ ಸಾಹಿತ್ಯ ಚಳುವಳಿ
ಕನ್ನಡ ಸಾಹಿತ್ಯ ಸಂದರ್ಭ ಕರ್ನಾಟಕ ಸಾಹಿತ್ಯ
ಅಕಾಡೆಮಿ ೧೯೯೦

೩೭. ನಿರಂಜನ ಬುದ್ಧಿ ಭಾವ ಬದುಕು
ಸ್ಪಂದನ ಪ್ರಕಾಶನ ಬೆಂಗಳೂರು ೧೯೮೪

೩೮. ನಾಟಕ ಜಿ.ಎಚ್. ಪ್ರಾಚೀನ ಮತ್ತು ಆಧುನಿಕ ಕನ್ನಡ ಸಾಹಿತ್ಯ,
ಒಂದು ನೋಟ, ನಿರಪೇಕ್ಷ,
ಅಕ್ಷರ ಪ್ರಕಾಶನ ಸಾಗರ ೧೯೮೪.

೪೦. ಶ್ರೀರಂಗ — ಪ್ರಗತಿಶೀಲ ಮೀಮಾಂಸೆ ವಿಚಾರ ಸಾಹಿತ್ಯ ಸಂ. ಒಂದು
ಬೆಂಗಳೂರು ವಿ.ವಿ. ೧೯೭೭

೪೧. ಲಕ್ಕಪ್ಪಗೌಡ ಎಚ್‌ಜಿ. — ಅಸಮಾನ್ಯ ಸಾಧನೆ ,
ಕಟ್ಟೀಮನಿ, ಬದುಕು ಬರಹ
ಗೀತಾ ಬುಕ್‌ಹೌಸ್,
ಮೈಸೂರು ೧೯೮೯

೪೨. ಸುಂದರಮ್ಮ — ಚದುರಂಗರ ಕಥಾಸಾಹಿತ್ಯ ಒಂದು ಅಧ್ಯಯನ
(ಅಪ್ರಕಟಿತ ನಿಬಂದ)
ಮೈಸೂರು ವಿ.ವಿ.

೪೩. ಬಿದರಹಳ್ಳಿ ನರಸಿಂಹಮೂರ್ತಿ — ಪ್ರದೇಶ ಧ್ವನಿ ಸಂಪುಟ ಒಂದು
ಐಬಿಎಚ್ ಪ್ರಕಾಶನ ಬೆಂಗಳೂರು ೧೯೮೬

೪೪. ನಿರಂಜನ ಸೀಮಂತಿನಿ — ಸಂ ಧ್ವನಿ ಸಂ ೧.ನಿ
ಐಬಿಎಚ್ ಪ್ರಕಾಶನ ಬೆಂಗಳೂರು ೧೯೮೬

೪೫. ವಜ್ರ ಮಟ್ಟಿ ಪಿ.ವಿ. — ಪ್ರಗತಿ ಶೀಲ ಸಾಹಿತಿಯಾಗಿ ನಿರಂಜನ
ಅಭಿನಂದನ ಕರ್ನಾಟಕ ಸಂಘ, ಪುತ್ತೂರು.

೪೬. ಸುಬ್ರಾಯ ಚೊಕ್ಕಾಡಿ — ನಿರಂಜನರ ಕಥಾ ಸಾಹಿತ್ಯ
ನಿರಂಜನ ಅಭಿನಂದನ,
ಕರ್ನಾಟಕ ಸಂಘ ಪುತ್ತೂರು.

೪೭. ಬಸವರಾಜ ಕಟ್ಟೀಮನಿ — ಜ್ವಾಲಾಮುಖಿಯ ಮೇಲೆ,
ಪ್ರಕಾಶಕರು: ಶಾರಾದಾ ಪ್ರಕಾಶನ
ಬೆಂಗಳೂರು

೪೮. ವ್ಯಾಸರಾಯ ಬಲ್ಲಾಳ, — ಬಂಡಾಯ
ಪ್ರಕಾಶಕರು : ಗೀತಾ ಬುಕ್ ಹೌಸ್.
ಮೈಸೂರು ೧೯೯೭.

ಆ-ಪೂರಕ ಆಕರ ಗ್ರಂಥಗಳು
ಮಹಾ ಪ್ರಬಂಧಗಳು

| | | |
|---|---|---|
| ೪೯. | ಡಾ. ಎನ್.ಕೆ. ಕೊದಂಡ ರಾಮ | ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ<br>ಪ್ರಕಾಶಕರು : ಗಾಯಿತ್ರಿ ಸ್ಮಾರಕ ಗ್ರಂಥಮಾಲೆ<br>ಮೈಸೂರು ೧೯೯೬ |
| ೫೦. | ಡಾ. ಬಸವರಾಜ ಸಾಧರ | ಬಸವರಾಜ ಕಟ್ಟೀಮನಿಯವರ ಕಾದಂಬರಿಗಳು<br>ಪ್ರಕಾಶಕರು: ವೀರಶೈವ ಅಧ್ಯಯನ ಅಕಾಡೆಮಿ<br>ಶ್ರೀನಾಗನೂರು ರುದ್ರಾಕ್ಷಿ ಮಠ ಬೆಳಗಾಂ ೨೦೦೦ |
| ೫೧. | ಸಂ. ದೇ.ಜ.ಗೌ. ಮತ್ತು ಸಿ.ಪಿ.ಕೆ | ಕಟ್ಟೀಮನಿ : ಬದುಕು -ಬರಹ -<br>ಪ್ರಕಾಶಕರು : ಗೀತಾ ಬುಕ್ ಹೌಸ್<br>ಮೈಸೂರು ೧೯೬೯ |
| ೫೨. | ಸಂ. ಕು.ತಿ. ಹರಿದಾಸ ಭಟ್ಟ | ಬಲ್ಲಾಳರ ಕಾದಂಬರಿಗಳು,<br>ಕೆಲವು ಅಧ್ಯಯನಗಳು<br>ಪ್ರಕಾಶಕರು : ಗೀತಾ ಬುಕ್ ಹೌಸ್<br>ಮೈಸೂರು ೧೯೯೮ |
| ೫೩. | ಸಂ. ಡಾ. ಹಾಮಾನಾ ಮತ್ತು<br>ಡಾ. ಪ್ರಧಾನ ಗುರುದತ್ತ | ವ್ಯಾಸರಾಯ ಬಲ್ಲಾಳ -<br>ಲೇ. ಡಾ. ವಿಜಯಲಕ್ಷ್ಮಿ<br>ಪ್ರಕಾಶಕರು: ನವ ಕರ್ನಾಟಕ ಪಬ್ಲಿಕೇಷನ್ಸ್<br>ಪ್ರವೇಟ್ ಲಿಮಿಟೆಡ್, ಬೆಂಗಳೂರು೨೦೦೦ |
| ೫೪. | ಪ್ರ.ಸಂ. ಡಾ. ಗುರಲಿಂಗ ಕಾಪಸೆ | ಸಾಲು ದೀಪಗಳು<br>ಸಂ. - ಜಿ.ಎಸ್. ಸಿದ್ದಲಿಂಗಯ್ಯ,<br>ಎಂ.ಎಚ್. ಕೃಷ್ಣಯ್ಯ<br>ಪ್ರಕಾಶನ: ಕನ್ನಡ ಸಾಹಿತ್ಯ ಅಡಾಡಮಿ<br>ಜೆಸಿ. ರಸ್ತೆ, ಬೆಂಗಳೂರು. |
| ೫೫. | ಗಿರಡ್ಡಿ ಗೋವಿಂದರಾಜ | ಕಾದಂಬರಿ : ವಸ್ತು ಮತ್ತು ತಂತ್ರ -<br>ಪ್ರಕಾಶಕರು: ಸ್ನೇಹ ಪ್ರಕಾಶನ<br>ವಿಜಯನಗರ ೨ನೇ ಹಂತ,<br>ಬೆಂಗಳೂರು, ೧೯೭೬. |
| ೫೬. | ಮಾಲತಿ ಪುಟ್ಟಣ್ಣ ಶೆಟ್ಟಿ | ಬಸವರಾಜ ಕಟ್ಟೀಮನಿ<br>ಪ್ರಕಾಶನ : ಸಾಹಿತ್ಯ ಅಕಾಡೆಮಿ,<br>ಬೆಂಗಳೂರು ೧೯೯೯ |

# ಪತ್ರಿಕಾ ಸೂಚಿ

೧. ಅಶೋಕ ಟಿ.ಪಿ. — ಪ್ರಗತಿಶೀಲತೆ, ಸಾಧನೆ ಮತ್ತು ಕೊಡುಗೆ

ಸಂಕ್ರಮಣ ಪತ್ರಿಕೆ

ಸಂಪುಟ ೨೩:ಸಂಚಿಕೆ ೩: ಮಾರ್ಚ್೧೯೮೮.

೨. ಎಲ್ಎಸ್. ಶೇಷಗಿರಿ ರಾವ್ — ತುಷಾರ, ಜೂನ್ ೧೯೯೩ ಪು. ೧೦೪